# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 530

ಮಾನ್ಯ ಸದಸ್ಯರ ಹೆಸರು : ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 05-02-2021

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಲ್ಲಿ ಮಂಡ್ಯ ಜಿಲ್ಲೆಯ ಮಹಿಳಾ ಆಯೋಗಕ್ಕೆ ಬಂದಿರುವ ದೂರುಗಳ ಸಂಖ್ಯೆ ಎಷ್ಟು; ಈ ಪೈಕಿ ಇತ್ಯರ್ಥಪಡಿಸಲಾಗಿರುವ ದೂರುಗಳು ಎಷ್ಟು; ಇತ್ಯರ್ಥಪಡಿಸಲು ಬಾಕಿ ಇರುವ ದೂರುಗಳ ಸಂಖ್ಯೆ ಎಷ್ಟು; | ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಲಾಗಿದೆ |
| ಆ | ಮಂಡ್ಯ ಜಿಲ್ಲೆಯಲ್ಲಿ ಎಷ್ಟು ಅಂಗನವಾಡಿ ಕೇಂದ್ರಗಳಿವೆ; ಇದರಲ್ಲಿರುವ ಮಕ್ಕಳ ಸಂಖ್ಯೆ ಎಷ್ಟು; ಇವರಿಗೆ ಆಹಾರವನ್ನು ಯಾವ ಮಾನದಂಡದ ಆಧಾರದಲ್ಲಿ ನೀಡಲಾಗುವುದು (ಪೂರ್ಣ ವಿವರ ನೀಡುವುದು) | • ಮಂಡ್ಯ ಜಿಲ್ಲೆಯಲ್ಲಿ ಒಟ್ಟು 2546 ಅಂಗನವಾಡಿ ಕೇಂದ್ರಗಳಿವೆ. ಮಂಡ್ಯ ಜಿಲ್ಲೆಯಲ್ಲಿರುವ ಅಂಗನವಾಡಿ ಕೇಂದ್ರಗಳಲ್ಲಿ ಒಟ್ಟು 87198 ಮಕ್ಕಳಿರುತ್ತಾರೆ.<br>• 6 ತಿಂಗಳಿಂದ 6 ವರ್ಷದ ಮಕ್ಕಳಿಗೆ ರೂ.8/-, ಪ್ರಾಯಪೂರ್ವ ಬಾಲಕಿಯರಿಗೆ ರೂ.9.50 ಮತ್ತು ಮಾತೃಪೂರ್ಣ ಯೋಜನೆಯಡಿ ಗರ್ಭಿಣಿ ಮತ್ತು ಬಾಣಂತಿಯರಿಗೆ ರೂ.21/-ರಂತೆ ಘಟಕ ವೆಚ್ಚ ನಿಗದಿಪಡಿಸಲಾಗಿದೆ. ಈ ಘಟಕ ವೆಚ್ಚದಡಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಮೇಲ್ವಿಚಾರಣಾ ಸಮಿತಿಯು ನಿರ್ಧರಿಸುವ ಆಹಾರದ ಮೆನುವಿನ ಆಧಾರದ ಮೇಲೆ ಮಕ್ಕಳಿಗೆ ಆಹಾರವನ್ನು ವಿತರಿಸಲಾಗುವುದು. ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕದ ಹಿನ್ನೆಲೆಯಲ್ಲಿ ಅಂಗನವಾಡಿ ಕೇಂದ್ರಗಳು ಮುಚ್ಚಿರುವುದರಿಂದ ಅಂಗನವಾಡಿ ಕೇಂದ್ರಗಳ ಮಕ್ಕಳ ಮನೆ ಬಾಗಿಲಿಗೆ ಕಚ್ಚಾ ಆಹಾರ ಪದಾರ್ಥಗಳನ್ನು ವಿತರಿಸಲಾಗುತ್ತಿದೆ. |
| ಇ | ಕಳೆದ 3 ವರ್ಷಗಳಿಂದ ಮಂಡ್ಯ ಜಿಲ್ಲೆಯಲ್ಲಿ ಉದ್ಯೋಗಿನಿ ಯೋಜನೆಯಡಿಯಲ್ಲಿ ಸಾಲ ಕೋರಿ ಸಲ್ಲಿಸಿರುವ ಅರ್ಜಿಗಳೆಷ್ಟು; ಇದರಲ್ಲಿ ಮಂಜೂರಾದ ಸಂಖ್ಯೆ ಎಷ್ಟು; ಅನುದಾನ ಬಿಡುಗಡೆಗೊಳಿಸಲಾದ ಅರ್ಜಿಗಳು ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ವಿವರವನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ. |
| ಈ | ಇಲಾಖೆಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರಿಗೆ ಹಾಗೂ ಹಿರಿಯ ನಾಗರಿಕರಿಗೆ ಇರುವ ಯೋಜನೆಗಳು ಯಾವುವು ಹಾಗೂ ಅರ್ಹತೆಗಳೇನು; ಕಳೆದ 3 ವರ್ಷಗಳಿಂದ ಇದರ ಅನುಷ್ಠಾನಕ್ಕಾಗಿ ಮಂಡ್ಯ ಜಿಲ್ಲೆಗೆ ನೀಡಲಾದ ಅನುದಾನ ಎಷ್ಟು? (ತಾಲ್ಲೂಕುವಾರು ಮಾಹಿತಿ ನೀಡುವುದು) | ವಿವರವನ್ನು ಅನುಬಂಧ-3 ರಲ್ಲಿ ಲಗತ್ತಿಸಿದೆ. |

**ಸಂಖ್ಯೆ:ಮಮಇ/15/ಮಅನಿ 2021**

(ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು

# 1. ಕರ್ನಾಟಕ ರಾಜ್ಯ ಮಹಿಳಾ ಆಯೋಗ

## ಅನುಬಂಧ–1

| ಕ್ರ ಸಂ | ಜಿಲ್ಲೆ | ಕೌಟುಂಬಿಕ ಸಮಸ್ಯೆ | ರಕ್ಷಣೆ | ವರದಕ್ಷಿಣೆ ಕಿರುಕುಳ | ವರದಕ್ಷಿಣೆ ಸಾವು (ಆತ್ಮಹತ್ಯೆ/ ಕೊಲೆ) | ಅತ್ಯಾಚಾರ | ಅತ್ಯಾಚಾರ ಸಾವು | ಲೈಂಗಿಕ ಕಿರುಕುಳ | ಕೆಲಸದ ಸ್ಥಳದಲ್ಲಿ ಕಿರುಕುಳ | ಪ್ರೇಮ ಪ್ರಕರಣ | ಜೀವನಾಂಶ | ಮಕ್ಕಳ ಅಭಿರಕ್ಷೆ/ ಪೋಷಕರ ಭೇಟಿ | ವಸತಿ ಕಲ್ಪಿಸುವ ಬಗ್ಗೆ | ಆಸ್ತಿ ವಿವಾದ | ಪೊಲೀಸ್ ದೌರ್ಜನ್ಯ | ಹಣ ವಂಚನೆ | ವಿಚ್ಛೇಧನೆ | ಜಾತಿ ನಿಂದನೆ | ಸೈಬರ್ ಕ್ರೈಂ | ಇತರೆ | ಒಟ್ಟು | ಮುಕ್ತಾಯ | ಚಾಲ್ತಿ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | **2016–17** | | | | | | | | | | | | | | | | | | | | | | |
| 1 | ಮಂಡ್ಯ | 8 | 21 | 7 | 4 | 0 | 0 | 1 | 2 | 2 | 1 | 0 | 0 | 3 | 1 | 2 | 0 | 0 | 0 | 22 | 74 | 74 | 0 |
| | **2017–18** | | | | | | | | | | | | | | | | | | | | | | |
| 2 | ಮಂಡ್ಯ | 14 | 22 | 2 | 1 | 0 | 0 | 0 | 2 | 1 | 0 | 0 | 0 | 0 | 0 | 1 | 0 | 0 | 0 | 28 | 71 | 71 | 0 |
| | **2018–19** | | | | | | | | | | | | | | | | | | | | | | |
| 3 | ಮಂಡ್ಯ | 8 | 21 | 7 | 0 | 0 | 0 | 0 | 2 | 1 | 0 | 0 | 0 | 3 | 1 | 0 | 0 | 0 | 0 | 22 | 65 | 65 | 0 |

ಅನುಬಂಧ-2

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ದಿ ನಿಗಮ

ಯೋಜನೆ ಹೆಸರು: ಉದ್ಯೋಗಿನಿ

| ಕ್ರ.ಸಂ | ತಾಲ್ಲೂಕಿನ ಹೆಸರು | ಸಾಲ ಕೋರಿ ಸಲ್ಲಿಸಿರುವ ಅರ್ಜಿಗಳ ಸಂಖ್ಯೆ | | | ಬ್ಯಾಂಕುಗಳಿಂದ ಸಾಲ ಮಂಜೂರಾದ ಅರ್ಜಿಗಳ ಸಂಖ್ಯೆ | | | ಸಹಾಯಧನ ಬಿಡುಗಡೆಗೊಳಿಸಿದ ಅರ್ಜಿಗಳ ಸಂಖ್ಯೆ | | |
|---|---|---|---|---|---|---|---|---|---|---|
| | | **2017-18** | **2018-19** | **2019-20** | **2017-18** | **2018-19** | **2019-20** | **2017-18** | **2018-19** | **2019-20** |
| 1 | ಮಂಡ್ಯ | 199 | 112 | 192 | 12 | 3 | 14 | 12 | 3 | 14 |
| 2 | ಮದ್ದೂರು | 91 | 85 | 226 | 20 | 6 | 11 | 16 | 6 | 11 |
| 3 | ಮಳವಳ್ಳಿ | 109 | 142 | 167 | 13 | 1 | 7 | 13 | 1 | 7 |
| 4 | ಮೇಲುಕೋಟೆ | 164 | 235 | 195 | 15 | 7 | 14 | 15 | 7 | 14 |
| 5 | ಶ್ರೀರಂಗಪಟ್ಟಣ | 99 | 126 | 159 | 18 | 5 | 2 | 18 | 4 | 2 |
| 6 | ನಾಗಮಂಗಲ | 26 | 32 | 78 | 10 | 6 | 8 | 10 | 6 | 8 |
| 7 | ಕೆ.ಆರ್.ಪೇಟೆ | 190 | 160 | 323 | 9 | 5 | 11 | 9 | 5 | 11 |
| ಒಟ್ಟು | | 878 | 892 | 1340 | 97 | 33 | 67 | 93 | 32 | 67 |

ಅನುಬಂಧ–(3)

1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಯಲ್ಲಿರುವ ಯೋಜನೆಗಳು ಹಾಗೂ ಅರ್ಹತೆಗಳ ವಿವರ

| ಕ್ರ ಸಂ. | ಯೋಜನೆಯ ಹೆಸರು | ಅರ್ಹತೆಗಳು |
|---|---|---|
| 1) | ಪೂರಕ ಪೌಷ್ಠಿಕ ಆಹಾರ | ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾದ ಫಲಾನುಭವಿಗಳಿಗೆ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ. ಅಂಗನವಾಡಿ ಕೇಂದ್ರಕ್ಕೆ 06 ತಿಂಗಳಿಂದ 06 ವರ್ಷದ ಮಕ್ಕಳು/ ಗರ್ಭಿಣಿಯರು/ಬಾಣಂತಿಯರು, 11 ರಿಂದ 14 ವರ್ಷದ ಶಾಲೆಯಿಂದ ಹೊರಗುಳಿದ ಕಿಶೋರಿಯರು ದಾಖಲಾಗಬಹುದಾಗಿರುತ್ತದೆ. |
| 2) | ಮಾತೃಪೂರ್ಣ ಯೋಜನೆ | ಅಂಗನವಾಡಿ ಕೇಂದ್ರಕ್ಕೆ ದಾಖಲಾದ ಗರ್ಭಿಣಿಯರು/ಬಾಣಂತಿಯರು ಮಾತೃಪೂರ್ಣ ಯೋಜನೆ ಪ್ರಯೋಜನ ಪಡೆಯಲು ಅರ್ಹರಿರುತ್ತಾರೆ. |
| 3) | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆ. | ಅಂಗನವಾಡಿ ಕೇಂದ್ರದಲ್ಲಿ ದಾಖಲಾದ 06 ತಿಂಗಳಿಂದ 06 ವರ್ಷದ ಮಕ್ಕಳ ಆರೋಗ್ಯ ತಪಾಸಣೆಯಲ್ಲಿ ತೀವ್ರ ಅಪೌಷ್ಠಿಕ ಮಕ್ಕಳೆಂದು ಗುರುತಿಸಿದ ಮಕ್ಕಳಿಗೆ ವರ್ಷದಲ್ಲಿ ಗರಿಷ್ಠ ರೂ.2000/– ಮೀರದಂತೆ (ಪ್ರತಿ ಮಗುವಿಗೆ) ಖರ್ಚು ಭರಿಸಲಾಗುತ್ತಿದೆ. |
| 4) | ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆ | ಈ ಯೋಜನೆಯಡಿ ಅರ್ಜಿಯನ್ನು ಸಲ್ಲಿಸಿದ ಮೊದಲ ಮಗುವಿಗೆ ಗರ್ಭಿಣಿ / ಬಾಣಂತಿಯರು ಮೂರು ಕಂತುಗಳಲ್ಲಿ ರೂ.5000/– ಪಡೆಯಲು ಅರ್ಹರಿರುತ್ತಾರೆ. ಫಲಾನುಭವಿಯ ಮತ್ತು ಗಂಡನ ಆಧಾರ್ ಸಂಖ್ಯೆ ಕಡ್ಡಾಯವಾಗಿರುತ್ತದೆ. ಸರ್ಕಾರಿ / ಅರೆಸರ್ಕಾರಿ ನೌಕರರು ಈ ಯೋಜನೆಯ ಪ್ರಯೋಜನ ಪಡೆಯಲು ಅರ್ಹರಿರುವುದಿಲ್ಲ. ಮೊದಲ ಕಂತು ಪಡೆಯಲು ಗರ್ಭಿಣಿ ಎಂದು ತಿಳಿದು ಬಂದ ತಕ್ಷಣ ಅಂಗನವಾಡಿ ಕೇಂದ್ರದಲ್ಲಿ ನೋಂದಣಿಯಾಗಿರಬೇಕು. ಎರಡನೇ ಕಂತು ಪಡೆಯಲು ಕನಿಷ್ಠ 01 ಎಎನ್‌ಸಿಯನ್ನು ಗರ್ಭಿಣಿ ಮಹಿಳೆ ಮಾಡಿಸಿರಬೇಕು. ಮೂರನೇ ಕಂತನ್ನು ಪಡೆಯಲು ಮಗು ಜನಿಸಿ ಮೊದಲ ಸುತ್ತಿನ ಚುಚ್ಚುಮದ್ದು ಹಾಕಿಸಿರಬೇಕು. |
| 5) | ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ ಮರಣ ಪರಿಹಾರ ನಿಧಿ | ಅಂಗನವಾಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿ ಸೇವೆಯಲ್ಲಿದ್ದಾಗ ಮರಣ ಹೊಂದಿದ್ದಲ್ಲಿ ರೂ.50000/– ಮರಣ ಪರಿಹಾರ ನೀಡಲಾಗುತ್ತಿದೆ. |
| 6) | ಸ್ತ್ರೀಶಕ್ತಿ ಯೋಜನೆ | |
| • | ಸುತ್ತುನಿಧಿ: (ರೂ.5000/–) | • ಗುಂಪು ರಚನೆಯಾಗಿ ಕನಿಷ್ಠ 6 ತಿಂಗಳಾಗಿರಬೇಕು<br>• ಗುಂಪಿನಲ್ಲಿ ಕನಿಷ್ಠ 15 ರಿಂದ 20 ಸದಸ್ಯರಿರಬೇಕು<br>• ಪ್ರತಿ ಸದಸ್ಯರು ಉಳಿತಾಯ ಪ್ರಾರಂಭಿಸಿರಬೇಕು.<br>• ಪ್ರತಿವಾರ ಸದಸ್ಯರು ಸಭೆ ನಡೆಸಬೇಕು.<br>• ಗುಂಪಿನ ಹೆಸರಿನಲ್ಲಿ ಬ್ಯಾಂಕ್ ಖಾತೆ ಹೊಂದಿರ ಬೇಕು.<br>• ಗುಂಪಿನಲ್ಲಿ ನಿಗದಿಪಡಿಸಿದ ದಾಖಲಾತಿಗಳನ್ನು ನಿರ್ವಹಿಸುತ್ತಿರ ಬೇಕು.<br>• ಗುಂಪಿನ ಆಂತರಿಕ ಸಾಲ ಹಾಗೂ ಸಾಲ ಮರುಪಾವತಿ ಉತ್ತಮವಾಗಿರ ಬೇಕು. |

| ಕ್ರ ಸಂ. | ಯೋಜನೆಯ ಹೆಸರು | ಅರ್ಹತೆಗಳು |
|---|---|---|
| • | ಹೆಚ್ಚುವರಿ ಸುತ್ತುನಿಧಿ (ರೂ.5000/- ರಿಂದ ರೂ.25000/-) | • ಗುಂಪಿನಲ್ಲಿ 15-20 ಸದಸ್ಯರಿರಬೇಕು<br>• ಶೇ 50%ಕ್ಕಿಂತ ಹೆಚ್ಚು ಸದಸ್ಯರು ಬಡತನ ರೇಖೆಗಿಂತ ಕೆಳಗಿರಬೇಕು<br>• ಯೋಜನೆಯ ಪ್ರಾರಂಭದಿಂದ ಸತತವಾಗಿ ಕನಿಷ್ಠ 10 ವರ್ಷ ಕಾರ್ಯನಿರತವಾಗಿರಬೇಕು. ಸಾಕ್ಷರರಾಗಿರಬೇಕು.<br>• ಆಂತರಿಕ ಸಾಲ ಹಾಗೂ ಬ್ಯಾಂಕ ಸಾಲ ಪಡೆದಿರಬೇಕು.<br>• ಸಾಲ ಮರುಪಾವತಿ ಉತ್ತಮವಾಗಿರಬೇಕು<br>• ದಾಖಲಾತಿಗಳನ್ನು ಗುಂಪಿನ ಸದಸ್ಯರು ನಿರ್ವಹಿಸುತ್ತಿರಬೇಕು<br>• ವಿವಿಧ ಇಲಾಖೆಗಳ ಕಾರ್ಯಕ್ರಮಗಳ ಸೌಲಭ್ಯ ಪಡೆದಿರಬೇಕು<br>• ಮಾರುಕಟ್ಟೆ ಚಟುವಟಿಕೆಗಳಲ್ಲಿ ವಿಶೇಷವಾಗಿ ತೊಡಗಿರಬೇಕು<br>• ಗೊಂಚಲು ಗುಂಪಿನ ಸದಸ್ಯರಾಗಿರಬೇಕು<br>• ಪ್ರತಿ ವರ್ಷ ಗ್ರೇಡಿಂಗ್ ಮಾಡಬೇಕು<br>• ಗುಂಪುಗಳು ಸಾಮಾಜಿಕ ಸುಧಾರಣೆ ಹಾಗೂ ಸಾಕ್ಷರತಾ ಕಾರ್ಯಕ್ರಮದಲ್ಲಿ ತೊಡಗಿಸಿಕೊಂಡಿರ ಬೇಕು |
| • | ಆದಾಯೋತ್ಪನ್ನ ಚಟುವಟಿಕೆಗಳಿಗೆ ಪ್ರೋತ್ಸಾಹಧನ (ರೂ.5000/-) | • ಗುಂಪಿನಿಂದ ಸುತ್ತುನಿಧಿ, ಉಳಿತಾಯದಿಂದ ಆಂತರಿಕ ಸಾಲ, ಬ್ಯಾಂಕ್ ಸಾಲಗಳನ್ನು ಬಳಸಿಕೊಂಡು ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಗುಂಪುಗಳು. |
| • | ಅಧಿಕ ಉಳಿತಾಯ ಮಾಡಿದ ಗುಂಪುಗಳಿಗೆ ಪ್ರೋತ್ಸಾಹಧನ (ರೂ.15000/- ರೂ.20000/-) | • ರೂ, 75000/-ಕ್ಕೂ ಮೇಲ್ಪಟ್ಟು ಉಳಿತಾಯ ಮಾಡಿರುವ ಗುಂಪುಗಳಿಗೆ ರೂ.15,000 ಪ್ರೋತ್ಸಾಹಧನ.<br>• ರೂ, 100000/-ಕ್ಕೂ ಮೇಲ್ಪಟ್ಟು ಉಳಿತಾಯ ಮಾಡಿರುವ ಗುಂಪುಗಳಿಗೆ ರೂ.20,000 ಪ್ರೋತ್ಸಾಹಧನ. |
| • | ಬ್ಯಾಂಕ್ ಸಾಲದ ಮೇಲಿನ ಬಡ್ಡಿಗೆ 6%ರ ಸಹಾಯಧನ: | • ರೂ,25000/- ರಿಂದ ರೂ.1.00 ಲಕ್ಷದವರೆಗೆ ಸಾಲವನ್ನು ಪಡೆಯುವ ಸ್ತ್ರೀಶಕ್ತಿ ಗುಂಪುಗಳಿಗೆ ಸಾಲದ ಮೇಲಿನ ಬಡ್ಡಿ ದರಕ್ಕೆ ಶೇ. 6ರ ಸಹಾಯಧನ. |
| 7) | ಗೆಳತಿ ವಿಶೇಷ ಚಿಕಿತ್ಸಾ ಘಟಕ ಯೋಜನೆ | ಲೈಂಗಿಕ ದೌರ್ಜನ್ಯ, ಕಿರುಕುಳ, ಅತ್ಯಾಚಾರ, ಆಸಿಡ್ ದಾಳಿ ಇತ್ಯಾದಿ ಸಂಕಷ್ಟಕ್ಕೆ ಒಳಗಾಗುವ ಮಹಿಳೆಯರು ಮತ್ತು ಮಕ್ಕಳಿಗೆ ವೈದ್ಯಕೀಯ ನೆರವು, ಆಪ್ತ ಸಮಾಲೋಚನೆ, ಪೊಲೀಸ್ ನೆರವು, ಕಾನೂನಿನ ನೆರವು, ಇತ್ಯಾದಿ ಸೌಲಭ್ಯಗಳನ್ನು ಒಂದೇ ಸೂರಿನಡಿ ಒದಗಿಸುವುದು ಈ ಯೋಜನೆಯ ಉದ್ದೇಶವಾಗಿದೆ. |

| ಕ್ರ ಸಂ. | ಯೋಜನೆಯ ಹೆಸರು | ಅರ್ಹತೆಗಳು |
| --- | --- | --- |
| 8) | ಸಖಿ ಒನ್ ಸ್ಟಾಪ್ ಸೆಂಟರ್ | ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ ಒಂದೇ ಸೂರಿನಡಿ ಸಮಗ್ರ ಸೌಲಭ್ಯ ಅಂದರೆ, ವೈದ್ಯಕೀಯ ಚಿಕಿತ್ಸೆ ಮತ್ತು ನೆರವು, ಪೊಲೀಸ್ ನೆರವು, ಕಾನೂನು ನೆರವು ಹಾಗೂ ಸಮಾಲೋಚನೆ ವ್ಯವಸ್ಥೆಗಳನ್ನು ಒದಗಿಸಲು ಭಾರತ ಸರ್ಕಾರವು ಮೊದಲನೇ ಹಂತದಲ್ಲಿ ದೇಶಾದ್ಯಂತ ಎಲ್ಲಾ ರಾಜ್ಯಗಳಲ್ಲಿ ತಲಾ ಒಂದರಂತೆ ಒನ್ ಸ್ಟಾಪ್ ಸೆಂಟರ್‌ನ್ನು ಸ್ಥಾಪಿಸಲು ಉದ್ದೇಶಿಸಿರುತ್ತದೆ. |
| 9) | ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣೆ ಕಾಯ್ದೆ-2005 ನಿಯಮ 2006 | ಕುಟುಂಬದಲ್ಲಿ ಕಿರುಕುಳ, ಮಾನಸಿಕ ಹಿಂಸೆ, ದೌರ್ಜನ್ಯ ಇತ್ಯಾದಿ ತೊಂದರೆಗೊಳಗಾಗುವ ಮಹಿಳೆಯರಿಗೆ ಆಪ್ತ ಸಮಾಲೋಚನೆ, ಕಾನೂನಿನ ನೆರವು, ಇತ್ಯಾದಿ ಸೌಲಭ್ಯಗಳನ್ನು ಒದಗಿಸುವುದು ಡಿ.ವಿ.ಆಕ್ಟ್ ಕಾಯ್ದೆಯ ಉದ್ದೇಶವಾಗಿದೆ. |
| 10) | ಸಾಂತ್ವನ ಯೋಜನೆ | ಕೌಟುಂಬಿಕ ದೌರ್ಜನ್ಯಕ್ಕೊಳಗಾದ ಪರಿತ್ಯಕ್ತ ಮಹಿಳೆಯರು, ಸಮಾಜದ ನಿಂದನೆಗೊಳಗಾದ ಮಹಿಳೆಯರಿಗೆ ತಾತ್ಕಾಲಿಕ ಆಶ್ರಯ ಕಲ್ಪಿಸುವುದು, ಕಾನೂನಿನ ನೆರವು ಹಾಗೂ ಸ್ವಾವಲಂಬಿ ಬದುಕು ಕಟ್ಟಿಕೊಳ್ಳಲು ನೆರವಾಗುವುದು ಈ ಯೋಜನೆಯ ಉದ್ದೇಶವಾಗಿದೆ. |
| 11) | ಸ್ವಾಧಾರ ಯೋಜನೆ | ಶೋಷಣೆಗೊಳಗಾದ, ಕುಟುಂಬದಿಂದ ತ್ಯಜಿಸಲ್ಪಟ್ಟ ಮತ್ತು ಸಂಕಷ್ಟದಲ್ಲಿರುವ ಮಹಿಳೆಯರಿಗೆ ಮತ್ತು ಮಕ್ಕಳಿಗೆ ಪುರ್ನವಸತಿ ಕಲ್ಪಿಸುವುದು ಹಾಗೂ ಸ್ವಾಧಾರ ಕೇಂದ್ರದಲ್ಲಿ ದಾಖಲಾಗುವ ಫಲಾನುಭವಿಗಳಿಗೆ ಸ್ವಯಂ ಉದ್ಯೋಗ ತರಬೇತಿ ನೀಡುವುದು ಈ ಯೋಜನೆಯ ಉದ್ದೇಶವಾಗಿದೆ. |
| 12) | ಭಾಗ್ಯಲಕ್ಷ್ಮಿ ಯೋಜನೆ | ಬಡತನ ರೇಖೆಗಿಂತ ಕೆಳಗಿನ ಕುಟುಂಬದಲ್ಲಿ ಜನಿಸಿದ ಮೊದಲ ಇಬ್ಬರು ಹೆಣ್ಣು ಮಕ್ಕಳಿಗೆ ಎಲ್.ಐ.ಸಿ. ಬಾಂಡ್ ಮೂಲಕ ವಿಮಾ ಸೌಲಭ್ಯವನ್ನು ಒದಗಿಸಲಾಗುವುದು. |
| 13) | ಬಾಲ್ಯವಿವಾಹ ನಿಷೇಧ ಕಾಯ್ದೆ | ಸಾಮಾಜಿಕ ಪಿಡುಗುಗಳಲ್ಲಿ ಒಂದಾದ ಬಾಲ್ಯವಿವಾಹವನ್ನು ತಡೆಗಟ್ಟಿ ಹೆಣ್ಣುಮಕ್ಕಳ ಭವಿಷ್ಯವನ್ನು ಉಜ್ವಲಗೊಳಿಸುವ ದೃಷ್ಟಿಯಿಂದ ಬಾಲ್ಯವಿವಾಹ ನಿಷೇಧ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು ಬಾಲ್ಯವಿವಾಹ ನಿಷೇಧ ಕಾಯ್ದೆಯ ಉದ್ದೇಶವಾಗಿದೆ. |

| ಕ್ರ ಸಂ. | ಯೋಜನೆಯ ಹೆಸರು | ಅರ್ಹತೆಗಳು |
|---|---|---|
| 14) | ನಿರ್ಗತಿಕ ಮಕ್ಕಳ ಕುಟೀರ ಯೋಜನೆ | ಅನಾಥ ಮತ್ತು ನಿರ್ಗತಿಕ ಮಕ್ಕಳ ಪಾಲನೆ/ಪೋಷಣೆ ಮಾಡುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ. ಸದರಿ ಯೋಜನೆಯಡಿ ಕನಿಷ್ಠ 3 ವರ್ಷ ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಿರುವ ನೋಂದಾಯಿತ ಸ್ವಯಂ ಸೇವಾ ಸಂಸ್ಥೆಗಳಿಗೆ 25 ಮಕ್ಕಳ ಒಂದು ಘಟಕದಂತೆ ಪಾಲನೆ ಹಾಗೂ ಪೋಷಣೆಗೆ ನಿರ್ಗತಿಕ ಮಕ್ಕಳ ಕುಟೀರವನ್ನು ತೆರೆಯಲು ಅನುಮತಿಯೊಂದಿಗೆ ಧನ ಸಹಾಯವನ್ನು ನೀಡಲಾಗುವುದು. ಈ ಯೋಜನೆಯಡಿ ಪ್ರತಿ ಮಗುವಿನ ನಿರ್ವಹಣೆಗಾಗಿ ಮಾಸಿಕ ರೂ.1000/-ಗಳ ಅನುದಾನವನ್ನು ಕೊಡಲಾಗುತ್ತದೆ. ಮಂಡ್ಯ ಜಿಲ್ಲೆಯಲ್ಲಿ ನಿರ್ಗತಿಕ ಮಕ್ಕಳ ಕುಟೀರ ಯೋಜನೆಯಡಿ 2 ಕುಟೀರಗಳು ಕಾರ್ಯನಿರ್ವಹಿಸುತ್ತಿದೆ. |

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಡಿ ಕಳೆದ 3 ವರ್ಷಗಳಿಂದ ಯೋಜನೆಗಳ ಅನುಷ್ಠಾನಕ್ಕಾಗಿ ಮಂಡ್ಯ ಜಿಲ್ಲೆಗೆ ನೀಡಲಾದ ಅನುದಾನದ ವಿವರ (ತಾಲ್ಲೂಕುವಾರು ಮಾಹಿತಿ)**

| ಕ್ರ ಸಂ. | ಯೋಜನೆಯ ಹೆಸರು | ತಾಲ್ಲೂಕುವಾರು ಮಂಡ್ಯ ಜಿಲ್ಲೆ | 2017-18 ಬಿಡುಗಡೆಯಾದ ಅನುದಾನ | 2018-19 ಬಿಡುಗಡೆಯಾದ ಅನುದಾನ | 2019-20 ಬಿಡುಗಡೆಯಾದ ಅನುದಾನ |
|---|---|---|---|---|---|
| 1 | ಪೂರಕ ಪೌಷ್ಟಿಕ ಅಹಾರ ಕಾರ್ಯಕ್ರಮ / ಮಾತೃಪೂಣ ಯೋಜನೆ | ಶ್ರೀರಂಗಪಟ್ಟಣ | 334.69 | 444.75 | 446.75 |
| | | ಪಾಂಡವಪುರ | 311.89 | 475.73 | 477.73 |
| | | ನಾಗಮಂಗಲ | 611.07 | 547.96 | 549.88 |
| | | ಮಂಡ್ಯ | 559.00 | 573.30 | 575.30 |
| | | ಮದ್ದೂರು | 733.82 | 684.38 | 686.65 |
| | | ಮಳವಳ್ಳಿ | 534.53 | 645.83 | 626.79 |
| | | ದುದ್ದ | 514.24 | 437.85 | 460.90 |
| | | ಕೆ.ಆರ್.ಪೇಟೆ | 828.08 | 691.81 | 693.54 |
| **ಒಟ್ಟು** | | | **4427.32** | **4501.61** | **4517.54** |
| 2 | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆ | ಶ್ರೀರಂಗಪಟ್ಟಣ | 0.68 | 0.06 | 0.00 |
| | | ಪಾಂಡವಪುರ | 0.58 | 0.04 | 0.30 |
| | | ನಾಗಮಂಗಲ | 0.38 | 0.32 | 0.34 |
| | | ಮಂಡ್ಯ | 1.04 | 0.42 | 0.38 |
| | | ಮದ್ದೂರು | 0.38 | 0.08 | 0.22 |
| | | ಮಳವಳ್ಳಿ | 0.38 | 0.00 | 0.32 |

| | | | | | |
|---|---|---|---|---|---|
| | | ದುದ್ದ | 0.36 | 0.06 | 0.16 |
| | | ಕೆ.ಆರ್.ಪೇಟೆ | 0.46 | 0.08 | 0.18 |
| ಒಟ್ಟು | | | **4.26** | **1.06** | **1.90** |
| 3 | ಪ್ರಧಾನಮಂತ್ರಿ ಮಾತೃ ವಂದನಾ ಯೋಜನೆ | ಶ್ರೀರಂಗಪಟ್ಟಣ | 15.11 | 50.20 | 60.65 |
| | | ಪಾಂಡವಪುರ | 9.66 | 47.83 | 56.20 |
| | | ನಾಗಮಂಗಲ | 10.58 | 33.72 | 64.93 |
| | | ಮಂಡ್ಯ | 14.64 | 73.33 | 81.80 |
| | | ಮದ್ದೂರು | 36.47 | 75.90 | 94.74 |
| | | ಮಳವಳ್ಳಿ | 19.75 | 77.15 | 85.62 |
| | | ದುದ್ದ | 11.26 | 46.69 | 53.10 |
| | | ಕೆ.ಆರ್.ಪೇಟೆ | 25.20 | 65.97 | 7.98 |
| ಒಟ್ಟು | | | **142.67** | **470.79** | **505.02** |
| 4 | ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಮರಣ ಪರಿಹಾರ ನಿಧಿ | ಶ್ರೀರಂಗಪಟ್ಟಣ | 2.50 | 0.00 | 0.00 |
| | | ಪಾಂಡವಪುರ | 0.00 | 0.50 | 0.50 |
| | | ನಾಗಮಂಗಲ | 1.00 | 0.00 | 1.00 |
| | | ಮಂಡ್ಯ | 0.50 | 1.00 | 0.50 |
| | | ಮದ್ದೂರು | 0.50 | 3.00 | 0.00 |
| | | ಮಳವಳ್ಳಿ | 1.00 | 0.50 | 1.00 |
| | | ದುದ್ದ | 0.50 | 0.50 | 0.00 |
| | | ಕೆ.ಆರ್.ಪೇಟೆ | 1.00 | 2.00 | 0.50 |
| ಒಟ್ಟು | | | **7.00** | **7.50** | **3.50** |
| **5** | ಸ್ತ್ರೀಶಕ್ತಿ ಯೋಜನೆ | ಶ್ರೀರಂಗಪಟ್ಟಣ | 19.15 | 1.32 | 0.42 |
| | | ಪಾಂಡವಪುರ | 30.49 | 1.02 | 0.42 |
| | | ನಾಗಮಂಗಲ | 23.22 | 1.22 | 0.47 |
| | | ಮಳವಳ್ಳಿ | 35.32 | 1.86 | 0.54 |
| | | ಮದ್ದೂರು | 43.95 | 2.58 | 0.62 |
| | | ಮಂಡ್ಯ | 70.35 | 2.52 | 2.29 |
| | | ದುದ್ದ | 35.22 | 1.32 | 0.32 |
| | | ಕೆ.ಆರ್.ಪೇಟೆ | 35.37 | 1.67 | 0.42 |
| ಒಟ್ಟು | | | **293.07** | **13.51** | **5.50** |
| 6 | ಗೆಳತಿ ವಿಶೇಷ ಚಿಕಿತ್ಸಾ ಘಟಕ ಯೋಜನೆ | ಮಂಡ್ಯ | 7.87 | 8.25 | 4.48 |

| | | | | | |
|---|---|---|---|---|---|
| 7 | ಸಖಿ ಒನ್ ಸ್ಟಾಪ್ ಸೆಂಟರ್ | ಮಂಡ್ಯ | 0.00 | 30.91 | 15.00 |
| 8 | ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣೆ ಕಾಯ್ದೆ–2005 ನಿಯಮ 2006 | ಮಂಡ್ಯ | 1.45 | 2.47 | 2.28 |
| | | ಮದ್ದೂರು | 1.45 | 2.47 | 2.28 |
| | | ಮಳವಳ್ಳಿ | 1.45 | 2.47 | 2.28 |
| | | ದುದ್ದ | 1.45 | 2.47 | 2.28 |
| | | ಕೆ.ಆರ್.ಪೇಟೆ | 1.45 | 2.47 | 2.28 |
| | | ಶ್ರೀರಂಗಪಟ್ಟಣ | 1.45 | 2.47 | 2.28 |
| | | ಪಾಂಡವಪುರ | 1.45 | 2.47 | 2.28 |
| | | ನಾಗಮಂಗಲ | 1.45 | 2.47 | 2.28 |
| | | ಜಿಲ್ಲಾ ಕಛೇರಿ | 1.45 | 2.47 | 2.28 |
| **ಒಟ್ಟು** | | | **13.05** | **22.23** | **20.52** |
| 9 | ಸಾಂತ್ವನ ಯೋಜನೆ | ಮಂಡ್ಯ | 4.07 | 3.68 | 7.39 |
| | | ಮದ್ದೂರು | 3.94 | 2.98 | 7.75 |
| | | ಮಳವಳ್ಳಿ | 3.94 | 2.98 | 7.75 |
| | | ನಾಗಮಂಗಲ | 3.94 | 4.58 | 6.25 |
| | | ಪಾಂಡವಪುರ | 3.94 | 4.58 | 6.25 |
| | | ಶ್ರೀರಂಗಪಟ್ಟಣ | 3.94 | 4.58 | 6.25 |
| | | ಕೆ.ಆರ್.ಪೇಟೆ | 3.94 | 4.58 | 5.83 |
| **ಒಟ್ಟು** | | | **27.71** | **27.96** | **47.47** |
| 10 | ಸ್ವಾಧಾರ ಯೋಜನೆ | ಶ್ರೀರಂಗಪಟ್ಟಣ | 12.62 | 3.23 | 0.00 |
| | | ನಾಗಮಂಗಲ | 10.34 | 3.23 | 0.00 |
| | | ಮಂಡ್ಯ | 25.23 | 6.45 | 0.00 |
| **ಒಟ್ಟು** | | | **48.19** | **12.91** | **0.00** |
| 11 | ಭಾಗ್ಯಲಕ್ಷ್ಮಿ ಯೋಜನೆ | ಮಂಡ್ಯ | 1.22 | 2.24 | 2.07 |
| | | ಮದ್ದೂರು | 1.33 | 3.02 | 2.12 |
| | | ಮಳವಳ್ಳಿ | 1.33 | 2.84 | 2.11 |
| | | ದುದ್ದ | 1.22 | 2.68 | 1.77 |
| | | ಕೆ.ಆರ್.ಪೇಟೆ | 1.22 | 3.08 | 2.17 |
| | | ಶ್ರೀರಂಗಪಟ್ಟಣ | 1.33 | 2.46 | 1.94 |
| | | ಪಾಂಡವಪುರ | 1.33 | 2.65 | 2.11 |

| | | | | | |
|---|---|---|---|---|---|
| | | ನಾಗಮಂಗಲ | 1.33 | 2.60 | 2.11 |
| | | ಜಿಲ್ಲಾ ಕಛೇರಿ | 1.42 | 2.27 | 2.17 |
| **ಒಟ್ಟು** | | | **11.75** | **23.82** | **18.56** |
| 12 | ಬಾಲ್ಯವಿವಾಹ ನಿಷೇಧ ಕಾಯ್ದೆ | ಮಂಡ್ಯ | ಸದರಿ ಸಾಲಿನಲ್ಲಿ ಜಿಲ್ಲೆಗಳಿಗೆ ಅನುದಾನ ಬಿಡುಗಡೆ ಯಾಗಿರುವುದಿಲ್ಲ | 0.27 | 0.50 |
| | | ಮದ್ದೂರು | | 0.10 | 0.45 |
| | | ಮಳವಳ್ಳಿ | | 0.10 | 0.40 |
| | | ಕೆ.ಆರ್.ಪೇಟೆ | | 0.10 | 0.35 |
| | | ಶ್ರೀರಂಗಪಟ್ಟಣ | | 0.10 | 0.25 |
| | | ಪಾಂಡವಪುರ | | 0.10 | 0.25 |
| | | ನಾಗಮಂಗಲ | | 0.10 | 0.30 |
| **ಒಟ್ಟು** | | | **0.00** | **0.87** | **2.50** |
| 13 | ನಿರ್ಗತಿಕ ಮಕ್ಕಳ ಕುಟೀರ ಯೋಜನೆ | ನಾಗಮಂಗಲ | 10.80 | 10.80 | 10.80 |
| | | ಮಂಡ್ಯ | 2.70 | 2.70 | 2.70 |
| **ಒಟ್ಟು** | | | **13.50** | **13.50** | **13.50** |

## 2. ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಯೋಜನೆಗಳು ಹಾಗೂ ಮಾನದಂಡಗಳು

| ಕ್ರ ಸಂ. | ಯೋಜನೆಯ ಹೆಸರು ಮತ್ತು ಯೋಜನೆಯ ವಿವರ | ಮಾನದಂಡಗಳು |
|---|---|---|
| 1 | **ಸರ್ಕಾರದಿಂದ ಶ್ರವಣದೋಷವುಳ್ಳ ಮತ್ತು ಅಂಧ ಮಕ್ಕಳಿಗಾಗಿ ವಿಶೇಷ ವಸತಿಯುತ ಶಾಲೆಗಳು** :<br>ಇಲಾಖೆಯಿಂದ ಶ್ರವಣದೋಷವುಳ್ಳ ಮಕ್ಕಳಿಗಾಗಿ ಬೆಂಗಳೂರು ನಗರ, ಮೈಸೂರು, ಗುಲ್ಬರ್ಗ, ಬಳ್ಳಾರಿ, ಬೆಳಗಾಂ ಜಿಲ್ಲೆಗಳಲ್ಲಿ 4 ಕಿವುಡು ಮಕ್ಕಳ ಶಾಲೆಗಳು ಹಾಗೂ ಗುಲ್ಬರ್ಗಾ, ಮೈಸೂರು, ದಾವಣಗೆರೆ ಹಾಗೂ ಹುಬ್ಬಳ್ಳಿಗಳಲ್ಲಿ 4 ಅಂಧ ಮಕ್ಕಳ ಶಾಲೆಗಳನ್ನು ನಡೆಸಲಾಗುತ್ತಿದೆ. ಈ ಶಾಲೆಗಳಲ್ಲಿ ಮಕ್ಕಳಿಗೆ ಉಚಿತವಾಗಿ ವಸತಿ, ಊಟ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ. ಬೆಳಗಾಂನಲ್ಲಿ ಶ್ರವಣದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ಹಾಗೂ ದಾವಣಗೆರೆಯಲ್ಲಿ ಅಂಧ ಹೆಣ್ಣು ಮಕ್ಕಳಿಗಾಗಿ ಇರುವ ಪ್ರತ್ಯೇಕ ಶಾಲೆಯಾಗಿರುತ್ತದೆ. | • ಹುಟ್ಟಿದ ದಿನಾಂಕದ ಬಗ್ಗೆ ದಾಖಲಾತಿ.<br>• ಸಾಮಾನ್ಯ ಶಾಲೆಗಳಲ್ಲಿ ವ್ಯಾಸಂಗ ಮಾಡಲು ಸಾಧ್ಯವಾಗದ ಅಂಗವಿಕಲರಿಗೆ<br>• ಅಂಗವಿಕಲತೆ ಹೊಂದಿರುವ ಬಗ್ಗೆ ಪ್ರಮಾಣ ಪತ್ರ ಹೊಂದಿರಬೇಕು,<br>• ಬೇರೆ ಶಾಲೆಯಲ್ಲಿ ಓದಿದಲ್ಲಿ ವರ್ಗಾವಣೆ ಪ್ರಮಾಣ ಪತ್ರ<br>• 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಲು ಅವಕಾಶವಿರುತ್ತದೆ. |
| 2 | **1982ರ ಅನುದಾನ ಸಂಹಿತೆಯಡಿ ವಿಶೇಷ ಶಾಲೆಗಳು**<br>ವಿವಿಧ ವಿಕಲಚೇತನ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ, ಊಟ, ವಸತಿ ಮತ್ತು ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿ ಸಮಾಜದಲ್ಲಿ ಇತರೆ ಮಕ್ಕಳಂತೆ ವಿದ್ಯಾಭ್ಯಾಸವನ್ನು ಒದಗಿಸಲು ಉದ್ದೇಶಿಸಿರುವ ಸ್ವಯಂ ಸೇವಾ ಸಂಸ್ಥೆಗಳಿಗೆರಾಜ್ಯ ಸರ್ಕಾರವು ಜಿಲ್ಲಾ ಪಂಚಾಯಿತಿ ಮೂಲಕ ಧನ ಸಹಾಯ ನೀಡುವ ಯೋಜನೆ. | ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವಿಶೇಷ ಶಾಲೆಗಳನ್ನು ನಡೆಸಲಾಗುತ್ತಿದೆ.<br>• ಸ್ವಯಂ ಸೇವಾ ಸಂಸ್ಥೆಯು ಭಾರತದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಪ್ರಕಾರ ನೊಂದಣಿಯಾಗಿರುವ ಚಾರಿಟಬಲ್ ಟ್ರಸ್ಟ್ ಸೊಸೈಟಿ ಅಥವಾ ಸಮಾಜಸೇವೆಯಲ್ಲಿ ತೊಡಗಿರುವ ಅಧಿಕಾರೇತರ ಸಂಸ್ಥೆಯಾಗಿರಬೇಕು. ಸ್ವಯಂ ಸೇವಾ ಸಂಸ್ಥೆಯು ಅಂಗವಿಕಲರ ಕಾಯ್ದೆ-1995 ಸಕ್ಷನ್ 50, 51 ರಂತೆ ನೊಂದಣಿ ಮಾಡಿಸಿರಬೇಕು.<br>• ಈ ಯೋಜನೆಯನ್ನು ಪಡೆಯಲು ಸ್ವಯಂ ಸೇವಾ ಸಂಸ್ಥೆಯು ಅಸ್ತಿತ್ವಕ್ಕೆ ಬಂದು ಕನಿಷ್ಠ 2 ವರ್ಷಗಳಾಗಿರಬೇಕು. ಸ್ವಯಂ ಸೇವಾ ಸಂಸ್ಥೆಯು, |

| | | |
|---|---|---|
| | | ಸಾಕಷ್ಟು ಸಿಬ್ಬಂದಿವರ್ಗದೊಂದಿಗೆ ಅಗತ್ಯವಾದ ಮೂಲ ಸೌಲಭ್ಯ ಸಂಪನ್ಮೂಲ ಹಾಗೂ ಅನುಭವ ಮತ್ತು ಆರ್ಥಿಕವಾಗಿ ಸದೃಢವಾಗಿರಬೇಕು.<br>• ಸ್ವಯಂ ಸೇವಾ ಸಂಸ್ಥೆಯು ಶಾಲೆಯನ್ನು ನಡೆಸುವಲ್ಲಿ ಅಥವಾ ಇಂತಹುದೇ ಇನ್ನಿತರ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಅನುಭವ ಹೊಂದಿರಬೇಕು. |
| 3 | <u>ಅಂಗವಿಕಲ ಮಕ್ಕಳ ಶಿಶು ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ</u><br>ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸುತ್ತಿರುವ ವಿಶೇಷ ಶಾಲೆಗಳಿಗೆ ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಸಹಾಯ ಧನ ನೀಡುವ ಯೋಜನೆಯಾಗಿದೆ. ಸದರಿ ಯೋಜನೆಯು ಎಲ್ಲಾ ವಿಧದ ವಿಕಲಚೇತನ ಮಕ್ಕಳಿಗೆ ವ್ಯಾಸಂಗ ಮಾಡಲು ಪ್ರತ್ಯೇಕವಾಗಿ ಅಂಗವಿಕಲತೆಯ ಅನುಸಾರ ವಿಶೇಷ ಶಾಲೆಗಳನ್ನು ನಡೆಸಲು ಅವಕಾಶ ಮಾಡಿಕೊಡಲಾಗಿದೆ. | • ಸ್ವಯಂ ಸೇವಾ ಸಂಸ್ಥೆಯು ಭಾರತದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಪ್ರಕಾರ ನೊಂದಣಿಯಾಗಿರುವ ಚಾರಿಟಬಲ್ ಟ್ರಸ್ಟ್ ಸೊಸೈಟಿ ಅಥವಾ ಸಮಾಜಸೇವೆಯಲ್ಲಿ ತೊಡಗಿರುವ ಅಧಿಕಾರೇತರ ಸಂಸ್ಥೆಯಾಗಿರಬೇಕು. ಸ್ವಯಂ ಸೇವಾ ಸಂಸ್ಥೆಯು ಅಂಗವಿಕಲರ ಕಾಯ್ದೆ-1995 ಸೆಕ್ಷನ್ 50, 51 ರಂತೆ ನೊಂದಣಿ ಮಾಡಿಸಿರಬೇಕು.<br>• ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ವತಿಯಿಂದ ಅನುಮತಿ ಪಡೆದಂತಹ ಸಂಸ್ಥೆಗಳಿಗೆ ಮಾತ್ರವೇ ಸಹಾಯಧನ ನೀಡಲಾಗುವುದು.<br>• ಸಂಸ್ಥೆಯು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಂದ ಯಾವುದೇ ರೀತಿಯ ಶುಲ್ಕ, ದೇಣಿಗೆ, ವಂತಿಗೆ, ಧನಸಹಾಯ ಮುಂತಾದವುಗಳನ್ನು ಸ್ವೀಕರಿಸತಕ್ಕದ್ದಲ್ಲ.<br>• ಶಾಲೆಯಲ್ಲಿ ಕನಿಷ್ಠ 25 ವಿದ್ಯಾರ್ಥಿಗಳು ದಾಖಲಾಗಿರಬೇಕು. ಶಾಲೆಯಲ್ಲಿ 20 ಕ್ಕಿಂತ ಕಡಿಮೆ ಇದ್ದಲ್ಲಿ ಸಹಾಯಧನ ಪಡೆಯಲು ಅರ್ಹರಿರುವುದಿಲ್ಲ. ಮತ್ತು ಯೋಜನೆಯ ನಿಯಮಾನುಸಾರ ಅರ್ಹತೆಯನ್ನು ಪಡೆದಿರಬೇಕು. |
| 4 | <u>ಮಾನಸಿಕ ಅಸ್ವಸ್ಥ, ಸೆರಬ್ರಲ್ ಪಾಲ್ಸಿ, ಆಟಿಸಂ ಮಕ್ಕಳ ಹಗಲು ಯೋಗಕ್ಷೇಮ ಕೇಂದ್ರಗಳು</u><br>3 ವರ್ಷಕ್ಕಿಂತ ಮೇಲ್ಪಟ್ಟ ವಯೋಮಾನದ ಮಾನಸಿಕ ಅಸ್ವಸ್ಥ, ಸೆರಬ್ರಲ್ ಪಾಲ್ಸಿ, ಆಟಿಸಂ ಹಾಗೂ ತೀವ್ರತರನಾದ ಬುದ್ಧಿಮಾಂದ್ಯರ ಪಾಲನೆಗಾಗಿ ಬೆಂಗಳೂರು ನಗರದಲ್ಲಿ 02 ಹಗಲು ಯೋಗಕ್ಷೇಮ ಕೇಂದ್ರಗಳನ್ನು ನಡೆಸಲಾಗುತ್ತಿದೆ. ಅನುದಾನವನ್ನು ಮಕ್ಕಳ ಸಂಖ್ಯೆಯನ್ನು ಆಧಾರಿಸಿ ನೀಡಲಾಗುತ್ತದೆ. | • ಬೆಂಗಳೂರು ನಗರದ 6 ರಿಂದ 18 ವರ್ಷಕ್ಕಿಂತ ಮೇಲ್ಪಟ್ಟ ವಯೋಮಾನದ ಬುದ್ಧಿಮಾಂದ್ಯರು, ಸೆರಬ್ರಲ್ ಪಾಲ್ಸಿ, ಆಟಿಸಂ ಹಾಗೂ ತೀವ್ರತರನಾದ ವಿಕಲಚೇತನ ಮಕ್ಕಳಿಗೆ ಸೌಲಭ್ಯವನ್ನು ಒದಗಿಸಲಾಗುವುದು.<br>• ಈ ಯೋಜನೆಯನ್ನು ಯಾವುದೇ ಆದಾಯಮಿತಿಗೆ ಒಳಪಡಿಸಿರುವುದಿಲ್ಲ.<br>• ಪ್ರತಿ ಕೇಂದ್ರದಲ್ಲಿ 25 ಮಕ್ಕಳು ಮಾತ್ರ ಇರಲು ಅವಕಾಶ ಕಲ್ಪಸಲಾಗಿದೆ.<br>• ಇಲಾಖೆಯಿಂದ ಅನುಮತಿಯನ್ನು ಪಡೆದ ಸಂಸ್ಥೆಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. |
| 5 | <u>ವಿದ್ಯಾರ್ಥಿವೇತನ ಮತ್ತು ಪ್ರೋತ್ಸಾಹಧನ</u><br>ಈ ಕಾರ್ಯಕ್ರಮದಡಿ ಒಂದನೇ ತರಗತಿಯಿಂದ ಸ್ನಾತಕೋತ್ತರ ಪದವಿಯವರೆಗೆ ವ್ಯಾಸಂಗ ಮಾಡುತ್ತಿರುವ ಅರ್ಹ ವಿಕಲಚೇತನರಿಗೆ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. | • ವಿಕಲಚೇತನ ವಿದ್ಯಾರ್ಥಿಗಳ ವೇತನವನ್ನು ಮಂಜೂರು ಮಾಡಲು ಶಾಲಾ/ಕಾಲೇಜು ಮುಖ್ಯಸ್ಥರ ದೃಢೀಕರಣದೊಂದಿಗೆ ಅರ್ಜಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುವುದು.<br>• ಎಲ್ಲಾ ವರ್ಗದ ವಿಕಲಚೇತನ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲಾಗಿದೆ.<br>• ವಿಕಲಚೇತನ ವಿದ್ಯಾರ್ಥಿಗಳು ವಿದ್ಯಾರ್ಥಿವೇತನವನ್ನು ಪಡೆಯಲು ಯಾವುದೇ ಆದಾಯ ಮಿತಿ ಇರುವುದಿಲ್ಲ.<br>• ಉನ್ನತ ಶಿಕ್ಷಣದಲ್ಲಿ ಆಯಾ ವರ್ಷಗಳಲ್ಲಿ ಉತ್ತೀರ್ಣರಾದವರಿಗೆ ಮಾತ್ರ ಈ ಸೌಲಭ್ಯ ನೀಡಲಾಗುವುದು.<br>• ವಿದ್ಯಾರ್ಥಿಗಳು ಕಡ್ಡಾಯವಾಗಿ ಬ್ಯಾಂಕ್ ಖಾತೆಯನ್ನು ಹೊಂದಿರಬೇಕು ಹಾಗೂ ಅವರ ಬ್ಯಾಂಕ್ ಖಾತೆಗೆ ವಿದ್ಯಾರ್ಥಿವೇತನವನ್ನು ಜಮಾ ಮಾಡಲಾಗುವುದು. |
| 6 | <u>ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಬಹುಮಾನ ಯೋಜನೆ</u><br>ಪಬ್ಲಿಕ್ ಪರೀಕ್ಷೆಗಳಲ್ಲಿ ಶೇಕಡ 60 ಕ್ಕಿಂತಲೂ ಹೆಚ್ಚಿನ ಅಂಕಗಳನ್ನು ಪಡೆದ ಪ್ರತಿಭಾನ್ವಿತ ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ನೀಡಿ ವಿಕಲಚೇತನ ವಿದ್ಯಾರ್ಥಿಗಳನ್ನು ಪ್ರತಿಭಾವಂತರನ್ನಾಗಿಸಿ ಸಮಾಜದ ಮುಖ್ಯವಾಹಿನಿಗೆ ತರುವ ಯೋಜನೆಯಾಗಿದೆ. | • ವ್ಯಾಸಂಗ ಮಾಡುತ್ತಿರುವ ಹಾಗೂ ಪರೀಕ್ಷೆಗೆ ಹಾಜರಾದ ವಿದ್ಯಾರ್ಥಿಯು ಶೇ.40ಕ್ಕಿಂತ ಹೆಚ್ಚು ಅಂಗವಿಕಲತೆ ಹೊಂದಿರಬೇಕು ಹಾಗೂ ವೈದ್ಯಕೀಯ ಪ್ರಾಧಿಕಾರದಿಂದ ಪಡೆದ ವೈದ್ಯಕೀಯ ಪ್ರಮಾಣ ಪತ್ರ ಪಡೆದಿರಬೇಕು.<br>• ಪರೀಕ್ಷೆಗೆ ಹಾಜರಾದ ವಿದ್ಯಾರ್ಥಿಗಳು ಪ್ರಥಮ ಬಾರಿಗೆ ಉತ್ತೀರ್ಣರಾಗಿರಬೇಕು.<br>• ಶೇ.60%ಕ್ಕಿಂತಲೂ ಹೆಚ್ಚಿನ ಅಂಕಗಳಿಸಿದ ವಿದ್ಯಾರ್ಥಿಗಳು ಮಾತ್ರ ಈ ಯೋಜನೆಗೆ ಅರ್ಹರಾಗಿರುತ್ತಾರೆ.<br>• ಅರ್ಜಿಯನ್ನು ವ್ಯಾಸಂಗ ಮಾಡುತ್ತಿರುವ ಶಾಲೆ/ಕಾಲೇಜು ಮುಖ್ಯಸ್ಥರ ಮೂಲಕ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು. |

| | | |
|---|---|---|
| 7 | **ಶುಲ್ಕ ಮರುಪಾವತಿ**<br>ಎಸ್.ಎಸ್.ಎಲ್.ಸಿ. ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ, ಔದ್ಯೋಗಿಕ ಶಿಕ್ಷಣಗಳಿಗೆ ನಿಯಮಾನುಸಾರ ಆಯ್ಕೆಯಾಗುವ ವಿಕಲಚೇತನ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿಪಡಿಸಿರುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರು ಪಾವತಿಸುವ ಯೋಜನೆಯು ಜಾರಿಗೆ ಬಂದಿರುತ್ತದೆ. | • ವಿಕಲಚೇತನರು ಭಾರತದ ಪ್ರಜೆಯಾಗಿದ್ದು, ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಕನಿಷ್ಠ 5 ವರ್ಷ ಕರ್ನಾಟಕದಲ್ಲಿ ವ್ಯಾಸಂಗ ಮಾಡಿರತಕ್ಕದ್ದು.<br>• ಎಸ್.ಎಸ್.ಎಲ್.ಸಿ ನಂತರದ ವಿಕಲಚೇತನ ವಿದ್ಯಾರ್ಥಿಗಳು ಶುಲ್ಕ ಮರು ಪಾವತಿ ಪಡೆಯಲು ಅರ್ಹರಿರುತ್ತಾರೆ.<br>• ಯಾವ ಸಂಸ್ಥೆಗಳು ವಿಕಲಚೇತನ ವಿದ್ಯಾರ್ಥಿಗಳಿಗೆ ಶುಲ್ಕವನ್ನು ವಿಧಿಸುವುದಿಲ್ಲವೋ ಅಂತಹ ಸಂಸ್ಥೆಯ ವಿದ್ಯಾರ್ಥಿಗಳು ಶುಲ್ಕ ಮರುಪಾವತಿಗೆ ಅರ್ಹರಿರುವುದಿಲ್ಲ.<br>• ವಿಕಲಚೇತನ ವಿದ್ಯಾರ್ಥಿಗಳು ಹಿಂದಿನ ವರ್ಷದ ಪಬ್ಲಿಕ್ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗದಿದ್ದಲ್ಲಿ ಮುಂದಿನ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ. ಆದರೆ, ಮುಂದಿನ ಶೈಕ್ಷಣಿಕ ವರ್ಷದಲ್ಲಿ ಹಿಂದಿನ ಬಾಕಿ ವಿಷಯಗಳು ಸೇರಿದಂತೆ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಮಾತ್ರ ನಂತರದ ವರ್ಷದಲ್ಲಿ ಶುಲ್ಕ ಮರುಪಾವತಿಗೆ, ಆ ಕೋರ್ಸ್‌ಗಳಲ್ಲಿ ಕ್ಯಾರಿ ಓವರ್ ಪದ್ಧತಿ ಜಾರಿಯಿದ್ದು ಮುಂದಿನ ತರಗತಿಗೆ/ವರ್ಷಕ್ಕೆ ಪ್ರವೇಶ ಅವಕಾಶವಿದ್ದಲ್ಲಿ ಅಂತಹವರು ಶುಲ್ಕ ಮರುಪಾವತಿಗೆ ಅರ್ಹರಿರುತ್ತಾರೆ.<br>• ಪರೀಕ್ಷಾ ಶುಲ್ಕವನ್ನು ವರ್ಷಕ್ಕೆ ಒಂದು ಸಲ ಮಾತ್ರ ಮರುಪಾವತಿಸಲಾಗುವುದು.<br>• ಬೇರೆ ಇಲಾಖೆ ಹಾಗೂ ಇತರೆ ಮೂಲಗಳಿಂದ ಶುಲ್ಕವನ್ನು ಪಡೆದ ವಿದ್ಯಾರ್ಥಿಗಳಿಗೆ ಈ ಯೋಜನೆಯಡಿ ಶುಲ್ಕ ಮರುಪಾವತಿಗೆ ಅವಕಾಶವಿರುವುದಿಲ್ಲ.<br>• ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ. |
| 8 | **ಸ್ಪರ್ಧಾಚೇತನ**<br>ವಿಶೇಷ ಸಾಮರ್ಥ್ಯ / ಭಿನ್ನ ಸಾಮರ್ಥ್ಯದ ವಿದ್ಯಾವಂತ ನಿರುದ್ಯೋಗಿ ವ್ಯಕ್ತಿಗಳಿಗೆ ಐ.ಎ.ಎಸ್ / ಕೆ.ಎ.ಎಸ್/ ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವ ಯೋಜನೆಯಾಗಿದೆ.<br>ಕೇಂದ್ರ ಲೋಕಸೇವಾ ಆಯೋಗದಿಂದ (ಯು.ಪಿ.ಎಸ್.ಸಿ) ನಡೆಸುವ ಗ್ರೂಪ್ 'ಎ' ಮತ್ತು 'ಬಿ' ವೃಂದದ ಪರೀಕ್ಷೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ನಡೆಸುವ (ಕೆ.ಪಿ.ಎಸ್.ಸಿ) ಗ್ರೂಪ್ 'ಎ' ಮತ್ತು 'ಬಿ' ವೃಂದದ ಪರೀಕ್ಷೆಗಳಿಗೆ, ಬ್ಯಾಂಕ್ / ಜೀವವಿಮಾ ನಿಗಮ, ಸರ್ಕಾರಿ ಸ್ವಾಮ್ಯದ ಉದ್ದಿಮೆಗಳು ಮತ್ತು ಇತರೆ ಸಂಸ್ಥೆಗಳು ನಡೆಸುವ ಅಧಿಕಾರಿ / ಪ್ರಥಮ ದರ್ಜೆ / ದ್ವಿತೀಯ ದರ್ಜೆ ಹುದ್ದೆಗಳಿಗೆ ನಡೆಸುವ ಪರೀಕ್ಷೆಗಳಿಗೆ ತರಬೇತಿ ಪಡೆಯಲು ಸಹಾಯಧನ ನೀಡುವುದು. | • ರಾಜ್ಯ ಸರ್ಕಾರದ ಇತರೆ ಇಲಾಖೆಗಳಡಿ ಗುರುತಿಸಲ್ಪಟ್ಟ ಪೂರ್ವ ಪರೀಕ್ಷಾ ತರಬೇತಿ ಕೇಂದ್ರಗಳು (ಪ್ರಿ ಎಕ್ಸಾಮಿನೇಷನ್ ಟ್ರೈನಿಂಗ್ ಸೆಂಟರ್)<br>• ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಡಿ ಗುರುತಿಸಲ್ಪಟ್ಟ ಖಾಸಗಿ / ಅನುದಾನಿತ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ ತರಬೇತಿ ಕೇಂದ್ರಗಳು |
| 9 | **ಮಾನಸ ಕೇಂದ್ರ**<br>ಮಾನಸಿಕ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದು ಗುಣಮುಖರಾದ ಮಾನಸಿಕ ಅಸ್ವಸ್ಥರಿಗೆ ತರಬೇತಿ ಹಾಗೂ ಆಪ್ತ ಸಮಾಲೋಚನೆ ನೀಡಿ ಪುನರ್ವಸತಿ ಕಲ್ಪಿಸಲಾಗುತ್ತದೆ. ಇವರಿಗೆ ಅವಶ್ಯಕವಾಗಿ ಬೇಕಾಗಿರುವ ಆರೋಗ್ಯ, ಪೋಷಣೆಮತ್ತು ಆಶ್ರಯವನ್ನು ಒದಗಿಸುವುದು. | • ಮಾನಸಿಕ ಅಸ್ವಸ್ಥರು ಅಂದರೆ ಅಂಗವಿಕಲರ ಅಧಿನಿಯಮ 1995ರಲ್ಲಿ ತಿಳಿಸಿರುವ ವ್ಯಾಖ್ಯಾನಕ್ಕೆ ಒಳಪಟ್ಟವರು.<br>• ಫಲಾನುಭವಿಯು ಮಾನಸಿಕ ಅಸ್ವಸ್ಥರಾಗಿದ್ದು ಅವರ ಅಂಗವಿಕಲತೆಯು ಕನಿಷ್ಠ ಶೇಕಡ 40 ರಷ್ಟು ಇರತಕ್ಕದ್ದು.<br>• ಫಲಾನುಭವಿಯ ಕೌಟುಂಬಿಕ ವಾರ್ಷಿಕ ಆದಾಯ ನಗರ ಪ್ರದೇಶಗಳಲ್ಲಿ 24,000 ಮತ್ತು ಗ್ರಾಮೀಣ ಪ್ರದೇಶದಲ್ಲಿ 11,500 ರೂಗಳಿಗಿಂತ ಕಡಿಮೆ ಇರತಕ್ಕದ್ದು.<br>• ರಸ್ತೆಗಳಲ್ಲಿ ಓಡಾಡುವ (ಘಚಿಟಿಜಜಡಿಟಿಂ) ನಿರ್ಗತಿಕ ಮಾನಸಿಕ ಅಸ್ವಸ್ಥರನ್ನು ಈ ಕೇಂದ್ರಗಳಿಗೆ ಸೇರಿಸಿಕೊಳ್ಳಲಾಗುವುದು.<br>• ರಾಜ್ಯ ಉಚ್ಚ ನ್ಯಾಯಾಲಯವು ಮತ್ತು ನ್ಯಾಯಾಲಯಗಳು ಆದೇಶಿಸುವ ಫಲಾನುಭವಿಗಳನ್ನು ಸಹ ಈ ಕೇಂದ್ರಗಳಿಗೆ ಸೇರಿಸಿಕೊಳ್ಳಲಾಗುವುದು. |
| 10 | **ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳು**<br>ಗ್ರಾಮೀಣ ವಿಕಲಚೇತನ ಯುವತಿಯರ ಶಿಕ್ಷಣ ಮತ್ತು | • ಈ ವಸತಿ ನಿಲಯಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ಅಂಗವಿಕಲ ಉದ್ಯೋಗಸ್ಥ ಮಹಿಳೆಯರು/ ವಿದ್ಯಾರ್ಥಿನಿಯರು/ವೃತ್ತಿಪರ ತರಬೇತಿ ಪಡೆಯುತ್ತಿರುವ ಮಹಿಳೆಯರಿಗೆ ಮಾತ್ರ ಊಟ ಮತ್ತು ವಸತಿ ಸೌಲಭ್ಯ |

| | | |
|---|---|---|
| | ಉದ್ಯೋಗಕ್ಕೆ ಪ್ರೋತ್ಸಾಹ ನೀಡಲು 26 ಜಿಲ್ಲೆಗಳಲ್ಲಿ ಮಹಿಳಾ ವಸತಿ ನಿಲಯಗಳು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ಕಾರ್ಯನಿರ್ವಹಿಸುತ್ತಿವೆ. ಸದರಿ ವಸತಿ ನಿಲಯದಲ್ಲಿ ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ಹಾಗೂ ವಿದ್ಯಾರ್ಥಿನಿಯರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ. | ಕಲ್ಪಿಸಲಾಗಿರುತ್ತದೆ.<br>• ಉದ್ಯೋಗಸ್ಥ ಮಹಿಳೆಯರು ಈ ವಸತಿ ನಿಲಯದಲ್ಲಿ ಪ್ರವೇಶ ಪಡೆದಲ್ಲಿ ಊಟದ ವೆಚ್ಚವಾಗಿ ಮಾಹೆಯಾನ ರೂ.600.00 ಗಳನ್ನು ಮಾತ್ರ ಪಾವತಿಸಬೇಕಾಗಿರುತ್ತದೆ.<br>• ಈ ವಸತಿ ನಿಲಯದಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿನಿಯರು ಇತರೆ ಯಾವುದೇ ತರಹದ ಶಿಷ್ಯವೇತನವನ್ನು ಪಡೆಯಲು ಅರ್ಹರಿರುವುದಿಲ್ಲ, (ಪ್ರತಿಭಾನ್ವಿತವಾಗಿ ಪಡೆಯುವ ಶಿಷ್ಯ ವೇತನ ಹೊರತುಪಡಿಸಿ) |
| 11 | <u>ಸಾಧನ ಸಲಕರಣೆಗಳು</u><br>ಅಂಗವಿಕಲರ ದೈನಂದಿನ ಚಟುವಟಿಕೆಗಳಿಗೆ ಅಗತ್ಯುವಾಗಿರುವ ತ್ರಿಚಕ್ರವಾಹನಗಳು, ಶ್ರವಣ ಸಾಧನಗಳು, ಕೃತಕ ಅಂಗಾಂಗಗಳು, ಬ್ರೈಲ್ ಗಡಿಯಾರಗಳು, ದೃಷ್ಟಿದೋಷವುಳ್ಳವರು ಉಪಯೋಗಿಸುವ ಬಿಳಿ ಕೋಲುಗಳನ್ನು ಉಚಿತವಾಗಿ ವಿತರಿಸುವುದು. | • ಅಂಗವಿಕಲ ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿ 10 ವರ್ಷಗಳಿಂದ ವಾಸ ಮಾಡುತ್ತಿರುವ ಬಗ್ಗೆ ತಹಸೀಲ್ದಾರ್ ರವರಿಂದ ಪಡೆದ ದೃಢೀಕರಣ ಅಥವಾ ಕರ್ನಾಟಕದಲ್ಲಿ 10 ವರ್ಷಗಳಿಂದ ವ್ಯಾಸಂಗ ಮಾಡಿದ ವಿದ್ಯಾಭ್ಯಾಸದ ದೃಢೀಕರಣ ಪತ್ರ ಒದಗಿಸಬೇಕು.<br>• ಅಂಗವಿಕಲತೆ ಹೊಂದಿರುವ ಬಗ್ಗೆ ಸಂಬಂಧಪಟ್ಟ ವೈದ್ಯಕೀಯ ಮಂಡಳಿಯಿಂದ ಪಡೆದ ದೃಢೀಕರಣ ಒದಗಿಸಬೇಕು.<br>• ಅಂಗವಿಕಲ ಅಭ್ಯರ್ಥಿಯು ಕುಟುಂಬದ ವಾರ್ಷಿಕ ಆದಾಯ ನಗರ ವಾಸಿಯಾಗಿದ್ದಲ್ಲಿ ರೂ.24,000 ಮತ್ತು ಗ್ರಾಮೀಣ ವಾಸಿಯಾಗಿದ್ದಲ್ಲಿ ರೂ. 11,500 ಮೀರಿರಬಾರದು.<br>• ಈ ಹಿಂದೆ ಸರ್ಕಾರದವತಿಯಿಂದಾಗಲಿ ಅಥವಾ ಸಂಘ ಸಂಸ್ಥೆಗಳಿಂದಾಗಲೀ ಸಹಾಯಧನ/ಸಾಧನ ಸಲಕರಣೆ ಪಡೆದಿರಬಾರದು. |
| 12 | <u>ಟಾಕಿಂಗ್ ಲ್ಯಾಪ್‌ಟಾಪ್</u><br>ಅಂಧ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಹೊಂದಲು ಅನುಕೂಲವಾಗುವಂತೆ ಟಾಕಿಂಗ್ ಲ್ಯಾಪ್‌ಟಾಪ್ ಯೋಜನೆಯನ್ನು ಜಾರಿಗೆ ತರಲಾಗಿದೆ. | • ಯೋಜನೆಯ ಸೌಲಭ್ಯ ಪಡೆಯಲು ಯಾವುದೇ ಆದಾಯ ಮಿತಿ ಇರುವುದಿಲ್ಲ.<br>• ವ್ಯಾಸಂಗ ಮಾಡುತ್ತಿರುವ ಬಗ್ಗೆ ಸಂಬಂಧಿತ ಕಾಲೇಜಿನ ಪ್ರಾಂಶುಪಾಲರಿಂದ ದೃಢೀಕರಣ ಪತ್ರ ಒದಗಿಸಬೇಕು.<br>• ಜೀವಿತ ಕಾಲದಲ್ಲಿ ಒಂದು ಬಾರಿ ಈ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ.<br>• ಬೇರೆ ಇಲಾಖೆಗಳು ಅಥವಾ ಸಂಘ ಸಂಸ್ಥೆಗಳಿಂದ ಲ್ಯಾಪ್‌ಟಾಪ್ ಪಡೆದಿದ್ದಲ್ಲೀ ಅರ್ಹರಿರುವುದಿಲ್ಲ. ಈ ಬಗ್ಗೆ ಸ್ವಯಂ ಘೋಷಿತ ದೃಢೀಕರಣ ನೀಡಬೇಕು. |
| 13 | <u>ಯಂತ್ರಚಾಲಿತ ದ್ವಿಚಕ್ರವಾಹನಗಳು</u><br>ಉದ್ಯೋಗ ನಿರ್ವಹಿಸುವ / ಉನ್ನತ ಶಿಕ್ಷಣ ವ್ಯಾಸಂಗ ಮಾಡುತ್ತಿರುವ ಕಾಲೇಜುಗಳಿಗೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿ ಬರಲು ವಿಕಲಚೇತನರಿಗೆ ಚಲನವಲನಕ್ಕೆ ಅನುಕೂಲವಾಗುವಂತೆ ಯಂತ್ರಚಾಲಿತ ದ್ವಿಚಕ್ರ ವಾಹನ ನೀಡುವ ಯೋಜನೆಯಾಗಿದೆ. | • ವಿಕಲಚೇತನ ವ್ಯಕ್ತಿಗಳು ಭಾರತದ ಪ್ರಜೆಯಾಗಿದ್ದು ಕರ್ನಾಟಕದಲ್ಲಿ ಕನಿಷ್ಠ 10 ವರ್ಷಗಳು ವಾಸವಾಗಿರಬೇಕು. 20 ರಿಂದ 60ರ ವಯೋಮಾನದ ತೀವ್ರತರನಾದ ದೈಹಿಕ ವಿಕಲಚೇತನರಿಗೆ ಜೀವಿತ ಕಾಲದಲ್ಲಿ 1 ಬಾರಿ ಮಾತ್ರ ಸೌಲಭ್ಯ ಕಲ್ಪಿಸಲಾಗಿದೆ.<br>• ಈ ಯೋಜನೆಯ ಸೌಲಭ್ಯ ಪಡೆಯಲು ಕುಟುಂಬ ವಾರ್ಷಿಕ ಆದಾಯ ರೂ.2 ಲಕ್ಷಗಳಿಗಿಂತ ಕಡಿಮೆಯಿರಬೇಕು<br>• ಅಂಗವಿಕಲರ ಅಧಿನಿಯಮದಲ್ಲಿ ಸೂಚಿಸಿರುವ ಹಾಗೂ ವೈದ್ಯಕೀಯ ಪ್ರಾಧಿಕಾರದಿಂದ ನೀಡಿರುವ ಗುರುತಿನ ಚೀಟಿಯೊಂದಿಗೆ ದೃಢೀಕೃತ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಬೇಕು. ಇತರ ಇಲಾಖೆಗಳು ಅಥವಾ ಸಂಘ ಸಂಸ್ಥೆಗಳಿಂದ ಯಂತ್ರಚಾಲಿತ ದ್ವಿಚಕ್ರವಾಹನ ಪಡೆದಿದ್ದಲ್ಲಿ ಅಂತಹವರು ಅರ್ಹರಾಗಿರುವುದಿಲ್ಲ.<br>• ಈ ಸೌಲಭ್ಯ ಪಡೆಯುವ ದೈಹಿಕ ವಿಕಲಚೇತನರು ಶೇ.75% ಕಿಂತ ಹೆಚ್ಚಿನ ದೈಹಿಕ ವಿಕಲಚೇತನರಾಗಿರಬೇಕು ಹಾಗೂ ಸೊಂಟದ ಕೆಳಗೆ ಅಂದರೆ ಎರಡು ಕಾಲುಗಳಲ್ಲಿ ಸ್ವಾಧೀನ ಕಳೆದುಕೊಂಡಿರುವ, ಎರಡು ಕೈಗಳು ಸ್ವಾಧೀನದಲ್ಲಿರುವ ಹಾಗೂ ಇತರೆ ಎಲ್ಲಾ ರೀತಿಯಲ್ಲಿ ಸದೃಢವಾಗಿರುವ ವಿಕಲಚೇತನರಾಗಿರಬೇಕು. ಇಂತಹ ನ್ಯೂನತೆಯನ್ನು ಹೊಂದಿರುವ ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತೆರಿಗೆ ಮೊದಲ ಆದ್ಯತೆ ಮೇಲೆ ಈ ಸೌಲಭ್ಯ ನೀಡಬಹುದು.<br>• ಈ ಸೌಲಭ್ಯ ಪಡೆಯಲಿಚ್ಚಿಸುವ ವಿಕಲಚೇತನರು ದ್ವಿಚಕ್ರವಾಹನ ಚಾಲನೆ ಮಾಡುವ ಪರವಾನಗಿ ಪತ್ರ ಪಡೆದಿರಬೇಕು |
| 14 | <u>ಸಾಧನೆ</u><br>ಈ ಯೋಜನೆಯ ಅಡಿಯಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ಕ್ರೀಡಾ ಸ್ಪರ್ಧೆಯಲ್ಲಿ ಭಾಗವಹಿಸಿದ ಕ್ರೀಡಾ ಪಟುಗಳಿಗೆ ಧನಸಹಾಯ ನೀಡಲಾಗುವುದು. | • ಕ್ರೀಡೆಯಲ್ಲಿ ಭಾಗವಹಿಸಿದ ನಂತರ, ಭಾಗವಹಿಸಲು ಆಹ್ವಾನಿಸಿರುವ ಮಾಹಿತಿ ಹಾಗೂ ಪ್ರಯಾಣದ ವೆಚ್ಚದ ಹಾಗೂ ಇತರೆ ವೆಚ್ಚದ ಮೂಲ ದಾಖಲಾತಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು. |

| | | |
|---|---|---|
| | | • ಪ್ರಸ್ತಾವನೆ ಪರಿಶೀಲಿಸಿದ ನಂತರ ಸಹಾಯಧನವನ್ನು ಮಂಜೂರು ಮಾಡಲಾಗುವುದು. |
| 15 | **ಪ್ರತಿಭೆ**<br>ಅಂಗವಿಕಲರ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ತೊಡಗಿರುವ ಸ್ವಯಂ ಸೇವಾ ಸಂಸ್ಥೆಗಳು, ನೋಂದಾಯಿತ ಸಾಂಸ್ಕೃತಿಕ ಸ್ವಯಂ ಸೇವಾ ಸಂಸ್ಥೆಗಳು ಅಂಗವಿಕಲ ಕಲಾವಿದರನ್ನು ಒಳಗೊಂಡುಏರ್ಪಡಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮತ್ತು ವಿಕಲಚೇತನರು ವೈಯಕ್ತಿಕವಾಗಿ ನೀಡುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಸಹಾಯಧನ ನೀಡುವ ಯೋಜನೆಯಾಗಿದೆ. | • ಪ್ರಾಯೋಜಿತ ಕಾರ್ಯಕ್ರಮ ನೀಡುವ ಕಲಾವಿದರು ಅಲ್ಲವೇ ಪ್ರಾಯೋಜಿತ ಕಾರ್ಯಕ್ರಮಗಳನ್ನು ಪಡೆಯಲು ಉದ್ದೇಶಿಸಿರುವ ನೊಂದಾಯಿತ ಸಂಸ್ಥೆ ಕಲಾವಿದರು ಹಾಗೂ ಕಾರ್ಯಕ್ರಮದ ಕುರಿತು ಎಲ್ಲಾ ವಿವರಗಳೊಂದಿಗೆ ಸಂಬಂಧಪಟ್ಟ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಕನಿಷ್ಠ 1 ತಿಂಗಳ ಮೊದಲು ಅರ್ಜಿಯನ್ನು ಸಲ್ಲಿಸತಕ್ಕದ್ದು.<br>• ಕಾರ್ಯಕ್ರಮ ನಡೆದಿರುವ ಬಗ್ಗೆ ಸೂಕ್ತ ವಿವರಗಳನ್ನು ಹಾಗೂ ಅಗತ್ಯವಿರುವ ದಾಖಲೆಗಳನ್ನು ಒದಗಿಸುವುದು. |
| 16 | **<u>ಅಂಗವಿಕಲರ ಗ್ರಾಮೀಣ ಪುನರ್ವಸತಿ ಯೋಜನೆ</u>**<br>ರಾಜ್ಯದಲ್ಲಿರುವ ಎಲ್ಲಾ ಅಂಗವಿಕಲರಿಗೆ ಅವರ ವಾಸಸ್ಥಳದಲ್ಲಿಯೇ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಪುನರ್ವಸತಿ ಸೇವೆಯನ್ನು ಒದಗಿಸಲು ಅವಕಾಶ ಕಲ್ಪಿಸಿ ಅಗತ್ಯವಿರುವ ಸೇವೆಗಳನ್ನು ಅವರಿಗೆ ಒದಗಿಸುವ ಯೋಜನೆಯಾಗಿದೆ. | • ಪ್ರತಿ ಗ್ರಾಮ ಪಂಚಾಯತಿಗೆ ಒಬ್ಬರಂತೆ ಎಸ್.ಎಸ್.ಎಲ್.ಸಿ ಪಾಸಾದ ಅಥವಾ ಎಸ್.ಎಸ್.ಎಲ್.ಸಿಯಲ್ಲಿ ಅನುತ್ತೀರ್ಣರಾದವರನ್ನು ಗ್ರಾಮೀಣ ಪುನರ್ವಸತಿ ಕಾರ್ಯಕರ್ತರೆಂದು ನೇಮಕ ಮಾಡಲು ಅವಕಾಶವಿದೆ.<br>• ಪ್ರತಿ ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿನ ಸ್ಥಳೀಯ ಪದವಿಧರ ಅಥವಾ ಪದವಿಯಲ್ಲಿ ಅನುತ್ತೀರ್ಣರಾದವರನ್ನು ವಿವಿದೊದ್ದೇಶ ಕಾರ್ಯಕರ್ತರನ್ನಾಗಿ ನೇಮಕ ಮಾಡಲು ಅವಕಾಶವಿದೆ.<br>• ಕಾರ್ಯಕರ್ತರಾಗಿ ಆಯ್ಕೆಯಾಗಲು ಅಂಗವಿಕಲರ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸ್ಥಳೀಯ ಪ್ರಜೆಯಾಗಿರಬೇಕು. |
| 17 | **ಉದ್ಯೋಗ ಕೋಶ**<br>ವಿವಿಧ ಬಗೆಯ ಅಂಗವಿಕಲತೆಯನ್ನು ಹೊಂದಿರುವ ವ್ಯಕ್ತಿಗಳಿಗೆ ಸೂಕ್ತ ತರಬೇತಿ ಯನ್ನು ನೀಡಿ ಉದ್ಯೋಗವನ್ನು ಒದಗಿಸುವ ಸಲುವಾಗಿ ಹಾಗೂ ಸಾರ್ವಜನಿಕ ವಲಯಗಳಲ್ಲಿ ವಿಕಲಚೇತನರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸಿಕೊಡುವ ಉದ್ದೇಶ ದಿಂದ ಉದ್ಯೋಗ ಕೋಶವನ್ನು ಸರ್ಕಾರದ ಆದೇಶದಂತೆ ಮೆ॥ ಎನೇಬಲ್ ಇಂಡಿಯಾ, ಕೋರಮಂಗಲ, ಬೆಂಗಳೂರು ಸಂಸ್ಥೆಯ ಮುಖಾಂತರ ಬೆಂಗಳೂರಿನಲ್ಲಿ ಪ್ರಾರಂಭಿಸಲಾಗಿದೆ. | • ವಿಕಲಚೇತನರು 18-45 ವಯೋಮಾನದವರಾಗಿರಬೇಕು.<br>• ಅಭ್ಯರ್ಥಿಯು ಕರ್ನಾಟಕ ರಾಜ್ಯದವರಾಗಿರಬೇಕು.<br>• ಅಂಗವಿಕಲತೆಯ ಕುರಿತಂತೆ ವೈದ್ಯಕೀಯ ಮತ್ತು ವಿದ್ಯಾರ್ಹತೆ ಪ್ರಮಾಣ ಪತ್ರ ಸಲ್ಲಿಸಬೇಕು. |
| 18 | **ನಿರುದ್ಯೋಗ ಭತ್ಯೆ :**<br>ಅಂಗವಿಕಲರ ಅಧಿನಿಯಮ 1995ರ ಸೆಕ್ಷನ್ 68ರ ಪ್ರಕಾರ ಆಯಾ ರಾಜ್ಯ ಸರ್ಕಾರಗಳು ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ನೀಡಲು ಅವಕಾಶ ಕಲ್ಪಿಸಿಕೊಳ್ಳಬೇಕೆಂದು ತಿಳಿಸಿರುವ ಅನ್ವಯ ನಿರುದ್ಯೋಗ ಅಂಗವಿಕಲರಿಗೆ ಉದ್ಯೋಗ ದೊರೆಯುವವರೆಗೆ ಭತ್ಯೆ ರೂಪದಲ್ಲಿ ಸಹಾಯಧನವನ್ನು ನೀಡಲಾಗುವ ಯೋಜನೆಯಾಗಿದೆ. | • ಶೇ.40ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವೈಕಲ್ಯತೆ ಹೊಂದಿರಬೇಕು. ಹಾಗೂ ಎಸ್.ಎಸ್.ಎಲ್.ಸಿ. ಮತ್ತು ನಂತರದ ವಿದ್ಯಾರ್ಹತೆ ಹೊಂದಿರಬೇಕು<br>• 25 ರಿಂದ 45ರ ವರ್ಷ ವಯೋಮಿತಿಯೊಳಗಿರಬೇಕು.<br>• ಭಾರತದ ಪ್ರಜೆಯಾಗಿದ್ದು, ಕರ್ನಾಟಕದಲ್ಲಿ ಕನಿಷ್ಠ 10 ವರ್ಷಗಳು ವಾಸವಾಗಿರಬೇಕು.<br>• ಈ ಸೌಲಭ್ಯ ಪಡೆಯಲು ಯಾವುದೇ ಆದಾಯ ಮಿತಿ ಇರುವುದಿಲ್ಲ<br>• ಬೇರೆ ಯಾವುದೇ ಯೋಜನೆಯಡಿ ಅಂದರೆ, ಮಾಸಿಕ ಪೋಷಣಾ ಭತ್ಯೆ/ಶುಲ್ಕ ಮರುಪಾವತಿ/ವಿದ್ಯಾರ್ಥಿ ವೇತನ ಯೋಜನೆಗಳಡಿ ಸೌಲಭ್ಯ ಪಡೆಯುತ್ತಿರುವ ಫಲಾನುಭವಿಗಳು ನಿರುದ್ಯೋಗ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ. |
| 19 | **ಆಧಾರ ಯೋಜನೆ**<br>• ಅಂಗವಿಕಲರಿಗೆ ಸ್ವಯಂ ಉದ್ಯೋಗ ಒದಗಿಸುವ ನಿಟ್ಟಿನಲ್ಲಿ ಆಧಾರ ಯೋಜನೆಯು ಜಾರಿಯಲ್ಲಿದೆ.<br><br>**2018-19ನೇ ಸಾಲಿನ ಆಯವ್ಯಯ ಭಾಷಣದಲ್ಲಿ "ಆಧಾರ ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.35,000/-ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಿ,** | • ಫಲಾನುಭವಿಗಳಿಗೆ ಶೇ 40 ಹಾಗೂ ಹೆಚ್ಚಿನ ಅಂಗವಿಕಲತೆ ಇರತಕ್ಕದ್ದು.<br>• ಗ್ರಾಮೀಣ ಅಭ್ಯರ್ಥಿಗಳಿಗೆ ರೂ.11,500/- ಗಳು ಮತ್ತು ನಗರದ ಅಭ್ಯರ್ಥಿಗಳಿಗೆ ರೂ.24,00/-ಗಳಿಗಿಂತ ಕಡಿಮೆ ವಾರ್ಷಿಕ ಆದಾಯ ಇರತಕ್ಕದ್ದು.<br>• ಅಕ್ಷರಸ್ಥರಾಗಿರಬೇಕು.<br>• ಸಣ್ಣ ವ್ಯಾಪಾರ ಮಾಡುವ ನೈಪೂಣ್ಯವಿರಬೇಕು. |

| | | |
|---|---|---|
| | ಇದರಲ್ಲಿ ಶೇಕಡ 50ರಷ್ಟು ಬ್ಯಾಂಕ್ ಸಾಲ ಮತ್ತು ಶೇಕಡ 50ರಷ್ಟು ಸಬ್ಸಿಡಿ" ಎಂದು ಘೋಷಿಸಲಾಗಿದೆ. | • ಕಳೆದ 10 ವರ್ಷಗಳಿಂದ ಕರ್ನಾಟಕ ರಾಜ್ಯದ ನಿವಾಸಿಗಳಾಗಿರಬೇಕು.<br>• ಕನಿಷ್ಠ 18 ಹಾಗೂ ಗರಿಷ್ಠ 55ವರ್ಷಗಳೊಗಿನ ನಿರುದ್ಯೋಗಿಗಳು ಈ ಯೋಜನೆಯ ಸೌಲಭ್ಯ ಪಡೆಯಬಹುದಾಗಿದೆ. |
| 20 | **ವೈದ್ಯಕೀಯ ಪರಿಹಾರ**<br>ಅಂಗವಿಕಲತೆಯ ಪ್ರಮಾಣವನ್ನು ಕಡಿಮೆ ಮಾಡಿಕೊಳ್ಳಲು ಅಥವಾ ನಿವಾರಿಸುವ ಸಲುವಾಗಿ ಶಸ್ತ್ರಚಿಕಿತ್ಸೆಗೆ ಒಳಗಾಗುವ ವಿಕಲಚೇತನ ವ್ಯಕ್ತಿಗೆ ಶಸ್ತ್ರಚಿಕಿತ್ಸೆ/ ಔಷಧಿ/ವೈದ್ಯಕೀಯ ಪರೀಕ್ಷೆ/ ಬೆಡ್‌ಚಾರ್ಜ್‌ಗಳ ವೆಚ್ಚವನ್ನುಭರಿಸಲು ಗರಿಷ್ಠ ರೂ.1.00 ಲಕ್ಷಗಳವರೆಗೆ ಅನುದಾನವನ್ನು ನೀಡಲಾಗುವುದು. | • ಶಸ್ತ್ರ ಚಿಕಿತ್ಸೆಯಿಂದ ಅಂಗವಿಕಲತೆ ನಿವಾರಣೆಯಾಗುವ ಇಲ್ಲವೆ ಅಂಗವಿಕಲತೆಯ ಪ್ರಮಾಣ ಕಡಿಮೆಯಾಗುವ ಕುರಿತಂತೆ ತಜ್ಞ ವೈದ್ಯಾಧಿಕಾರಿಗಳಿಂದ ಪಡೆದ ದೃಢೀಕರಣ ಒದಗಿಸಬೇಕು.<br>• ಮರುಪಾವತಿ ಪಡೆಯಲು, ಚಿಕಿತ್ಸೆಗೆ ಸಂಬಂಧಪಟ್ಟ ಔಷಧಿ ಖರೀದಿ, ಬೆಡ್ ಖರ್ಚು, ವೈದ್ಯಕೀಯ ಪರೀಕ್ಷೆಗಳ ವೆಚ್ಚ ಮತ್ತು ಶಸ್ತ್ರಚಿಕಿತ್ಸೆಗೆ ತಗಲುವ ವೆಚ್ಚದ ರಸೀದಿ ಒದಗಿಸಬೇಕು |
| 21 | **ಬುದ್ಧಿಮಾಂದ್ಯ ಮಕ್ಕಳ ಪೋಷಕರ ವಿಮಾ ಯೋಜನೆ**<br>ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರ ಹೆಸರಲ್ಲಿ, ಭಾರತೀಯ ಜೀವ ವಿಮಾ ನಿಗಮಕ್ಕೆ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ನಿರ್ದೇಶನಾಲಯದಿಂದ ವಾರ್ಷಿಕ ವಿಮಾ ಕಂತನ್ನು ಪಾವತಿ ಮಾಡಿ ವಿಮಾ ಸೌಲಭ್ಯವನ್ನು ಒದಗಿಸಲಾಗುತ್ತದೆ. ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ಗರಿಷ್ಠ ರೂ.20,000ಗಳಿಗೆ ವಿಮೆ ಮಾಡಿಸಲಾಗುವುದು. | • ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು 18 ರಿಂದ 60 ವರ್ಷವರೆಗಿನ ವಯೋಮಿತಿಯವರಾಗಿರಬೇಕು.<br>• ಕುಟುಂಬದ ವಾರ್ಷಿಕ ವರಮಾನ ಗ್ರಾಮೀಣ ಪ್ರದೇಶದಲ್ಲಿ ರೂ 11,500/- ಮತ್ತು ನಗರ ಪ್ರದೇಶಗಳಲ್ಲಿ ರೂ.24,000/-ಗಳನ್ನು ಮೀರಿರಬಾರದು.<br>• ಬುದ್ಧಿಮಾಂದ್ಯತೆ ಬಗ್ಗೆ ತಜ್ಞವೈದ್ಯಾಧಿಕಾರಿಗಳಿಂದ ಪ್ರಮಾಣ ಪತ್ರ ಪಡೆದಿರಬೇಕು. |
| 22 | **ವಿವಾಹ ಪ್ರೋತ್ಸಾಹ ಧನ**<br>ವಿಕಲಚೇತನ ಯುವಕ/ಯುವತಿಯರನ್ನು ವಿವಾಹವಾಗುವ ಸಾಮಾನ್ಯ ಯುವಕ/ ಯುವತಿಯರಿಗೆ ನಿರಂತರವಾಗಿ ಮಾಸಿಕ ಆದಾಯ ದೊರಕಿಸಲು ಜಂಟಿಯಾಗಿ ರೂ.50,000/- ಗಳನ್ನು ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ 5 ವರ್ಷಗಳ ಅವಧಿಗೆ ನಿಶ್ಚಿತ ಠೇವಣಿ ಇಡಲಾಗುವುದು. 05 ವರ್ಷಗಳ ನಂತರ ಠೇವಣಿ ಮೊತ್ತವನ್ನು ವಾಪಸ್ಸು ಪಡೆಯಬಹುದು ಅಥವಾ ಮುಂದುವರಿಸಬಹುದಾಗಿರುತ್ತದೆ. | • ವಿಕಲಚೇತನ ವ್ಯಕ್ತಿಗಳೊಡನೆ ವಿವಾಹವಾಗುವ ಸಾಮಾನ್ಯ ವ್ಯಕ್ತಿಗಳಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ.<br>• ವಿವಾಹವಾಗುವ ಯುವತಿಯರ ವಯಸ್ಸು 18 ಹಾಗೂ ಯುವಕರ ವಯಸ್ಸು 21 ವರ್ಷಕ್ಕಿಂತ ಮೇಲ್ಪಟ್ಟಿರಬೇಕು.<br>• ವಿಕಲಚೇತನ ವ್ಯಕ್ತಿಗಳು/ಸಾಮಾನ್ಯ ವ್ಯಕ್ತಿಗಳು 2ನೇ ಮದುವೆ ಮಾಡಿಕೊಂಡಲ್ಲಿ ಈ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.<br>• ವಿಕಲಚೇತನರ ಯುವಕ/ಯುವತಿಯರ ವಿಕಲಚೇತನತೆಯ ಪ್ರಮಾಣ ಶೇ.40%ಕ್ಕಿಂತ ಹೆಚ್ಚಾಗಿರತಕ್ಕದ್ದು.<br>• ವಿವಾಹವಾಗುವ ಯುವಕ/ಯುವತಿಯರು ಕಡ್ಡಾಯವಾಗಿ ಸಂಬಂಧಪಟ್ಟವರಿಂದ ಪಡೆದ ವಾಸಸ್ಥಳ ದೃಢೀಕರಣ ಪತ್ರ ನೀಡತಕ್ಕದ್ದು. |
| 23 | **ಶಿಶುಪಾಲನ ಭತ್ಯೆ**<br>ಅಂಧ ಮಹಿಳೆಯರು ಮಗುವಿಗೆ ಜನ್ಮ ನೀಡಿದಾಗ ಆ ಮಗುವನ್ನು ಇತರ ಸಾಮಾನ್ಯ ತಾಯಂದಿರಂತೆ ಆರೈಕೆ ಮಾಡುವುದು ಕಷ್ಟಕರವಾಗಿರುತ್ತದೆ. ಇಂತಹ ಅಂಧ ಮಹಿಳೆಯರು ಹಾಗೂ ಅವರಿಗೆ ಜನಿಸುವ ಕನಿಷ್ಠ 2 ಮಕ್ಕಳಿಗೆ ಆರೈಕೆ ಮಾಡಲು ದಾದಿ/ಶುಶ್ರೂಷಕರ ಸೇವೆ, ಆರೋಗ್ಯ ಪಾಲನೆ, ಪೌಷ್ಠಿಕ ಆಹಾರ, ಔಷಧೋಪಚಾರಗಳಿಗೆ ಮಾಹೆಯಾನ ರೂ.2000/- ಗಳಂತೆ 5 ವರ್ಷಗಳ ಅವಧಿಗೆ ಸಹಾಯಧನವನ್ನು ನೀಡುವುದು. | • ವಿಕಲಚೇತನ ಅಂಧ ಮಹಿಳೆಯು ಭಾರತದ ಪ್ರಜೆಯಾಗಿರಬೇಕು. ಅರ್ಜಿ ಸಲ್ಲಿಸಿದ ದಿನಾಂಕಕ್ಕೆ ಕನಿಷ್ಠ 6 ವರ್ಷಗಳು ಕರ್ನಾಟಕದಲ್ಲಿ ವಾಸವಾಗಿರಬೇಕು.<br>• ಅಂಧ ಮಹಿಳೆಯ ವಯಸ್ಸು ಕನಿಷ್ಠ 18 ವರ್ಷಕ್ಕಿಂತ ಹೆಚ್ಚಾಗಿರಬೇಕು.<br>• ಕಂದಾಯ ಇಲಾಖೆಯಿಂದ ಪಡೆಯಲಾದ ಆದಾಯ ಪ್ರಮಾಣಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ಅವರುಗಳ ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಗಳ ಒಳಗಿರಬೇಕು.<br>• ಶಿಶು ಪಾಲನಾ ಭತ್ಯೆಯು 2 ಹೆರಿಗೆಗೆ ಮಾತ್ರ ಸೀಮಿತವಾಗಿರುತ್ತದೆ.<br>• ಸಹಾಯಕ್ಕಾಗಿ ಬರುವ ವ್ಯಕ್ತಿಯಿಂದ ಶಿಶು ಲಾಲನೆ, ಪಾಲನೆ, ಆರೋಗ್ಯ ಹಾಗೂ ಪೌಷ್ಠಿಕ ಆಹಾರ ಒದಗಿಸುವ ಕುರಿತು ಮುಚ್ಚಳಿಕೆ ಪಡೆಯತಕ್ಕದ್ದು.<br>• ಶಿಶು ಪಾಲನಾ ಭತ್ಯೆಯನ್ನು ಮಗುವಿನ ಆರೋಗ್ಯ, ಪೌಷ್ಠಿಕ ಆಹಾರ ಮತ್ತು ಪಾಲನೆಗೆ ಮಾತ್ರ ಉಪಯೋಗಿಸಲಾಗುವುದೆಂದು ದೃಢೀಕರಿಸತಕ್ಕದ್ದು. |
| 24 | **ನಿರಾಮಯ**<br>ಕೇಂದ್ರ ಸರ್ಕಾರದ ನ್ಯಾಷನಲ್ ಟ್ರಸ್ಟ್-1999 ಅಧಿನಿಯಮದಡಿ ಬರುವ 04 ಬಗೆಯ ವಿಕಲಚೇತನರಿಗೆ (ಬುದ್ಧಿಮಾಂದ್ಯರು, ಸೆರೆಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲರು) | • ಕರ್ನಾಟಕ ರಾಜ್ಯಾದ್ಯಾಂತ ಕೇಂದ್ರ ಸರ್ಕಾರದ ನ್ಯಾಷನಲ್ ಟ್ರಸ್ಟ್-1999 ಆಕ್ಟ್‌ನಡಿ ಬರುವ 04 ಬಗೆಯ ವಿಕಲಚೇತನರು ಅರ್ಹರಿರುತ್ತಾರೆ. (ಬುದ್ಧಿಮಾಂದ್ಯರು, ಸೆರೆಬ್ರಲ್ ಪಾಲ್ಸಿ, ಆಟಿಸಂ, ಮತ್ತು ಬಹುವಿಧ |

| | | |
|---|---|---|
| | "ನಿರಾಮಯ" ಆರೋಗ್ಯ ವಿಮಾ ಯೋಜನೆ ಯನ್ನು ಜಾರಿಗೆ ತಂದಿದ್ದು, ಸದರಿ ಯೋಜನೆ ಯನ್ವಯ ಕರ್ನಾಟಕ ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟಂಬದ 04 ಬಗೆಯ ವಿಕಲಚೇತನ ವ್ಯಕ್ತಿಗಳಿಗೆ ಪ್ರಥಮ ಬಾರಿ ಒಂದುಸಲ ವಾರ್ಷಿಕ ರೂ.250/-ಗಳನ್ನು ಸರ್ಕಾರದ ವತಿಯಿಂದ ವಿಮಾ ಕಂತಾಗಿ ಪಾವತಿಸಿ ಪ್ರತಿ ವರ್ಷ ರೂ.1.00 ಲಕ್ಷದವರೆಗೆ ವೈದ್ಯಕೀಯ ಸೌಲಭ್ಯ ಪಡೆಯಲು ಅವಕಾಶ ಕಲ್ಪಿಸಲಾಗಿದೆ.<br>ಈ ಯೋಜನೆಯನ್ನು ರಾಜ್ಯದಲ್ಲಿ ಕೇಂದ್ರ ಸರ್ಕಾರದ ನ್ಯಾಷನಲ್ ಟ್ರಸ್ಟ್ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ. | ಅಂಗವಿಕಲರು)<br>• ಬಡತನ ರೇಖೆಗಿಂತ ಕೆಳಗಿರುವ ವಿಕಲಚೇತನರು ಅರ್ಹರಿರುತ್ತಾರೆ. |
| 25 | **ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರ.**<br>ಹಿರಿಯ ನಾಗರಿಕರ ರಕ್ಷಣೆಗಾಗಿ, ಉಚಿತ ಕಾನೂನು ಸಲಹೆ, ಆಪ್ತ ಸಲಹೆ ನೀಡಲು ಹಾಗೂ ಸಮಸ್ಯೆಗಳ ತುರ್ತು ಸ್ಪಂದನೆಗಾಗಿ ದಿನದ 24 ಗಂಟೆಯೂ ಕಾರ್ಯನಿರ್ವಹಿಸುವ ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರ(ಟೋಲ್ ಫ್ರೀ ದೂರವಾಣಿ ಸಂಖ್ಯೆ:1090)ಗಳನ್ನು ಪೊಲೀಸ್ ಇಲಾಖೆಯ ಸಹಯೋಗದೊಂದಿಗೆ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯ ಆವರಣದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. | • 60 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರು ಈ ಯೋಜನೆಯ ಫಲಾನುಭವಿಗಳಾಗಿರುತ್ತಾರೆ.<br>• ಈ ಕೇಂದ್ರಗಳನ್ನು ಸೊಸೈಟಿಸ್ ರಿಜಿಸ್ಟ್ರೇಷನ್ ಆಕ್ಟ್ / ಟ್ರಸ್ಟ್ ಆಕ್ಟ್‌ನಡಿ ನೊಂದಣಿಯಾದ ಸಂಸ್ಥೆಗಳ ಮುಖಾಂತರ ನಿರ್ವಹಿಸಲಾಗುತ್ತದೆ. |
| 26 | **ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರ**<br>ಹಿರಿಯ ನಾಗರಿಕರ ರಕ್ಷಣೆ, ಆರೋಗ್ಯ ಹಾಗೂ ಇತರೆ ಅಗತ್ಯ ಅವಶ್ಯಕತೆಗಳನ್ನು ಹಾಗೂ ಸಮಾಜದ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸುವುದು ಯೋಜನೆಯ ಉದ್ದೇಶವಾಗಿದೆ. | • 60 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರು ಈ ಯೋಜನೆಯ ಫಲಾನುಭವಿಗಳಾಗಿರುತ್ತಾರೆ.<br>• ಈ ಕೇಂದ್ರಗಳನ್ನು ಸೊಸೈಟಿಸ್ ರಿಜಿಸ್ಟ್ರೇಷನ್ ಆಕ್ಟ್ / ಟ್ರಸ್ಟ್ ಆಕ್ಟ್‌ನಡಿ ನೋಂದಣಿಯಾದ ಸಂಸ್ಥೆಗಳ ಮುಖಾಂತರ ನಿರ್ವಹಿಸಲಾಗುತ್ತದೆ. |
| 27 | **ವೃದ್ಧಾಶ್ರಮಗಳು**<br>ಅರವತ್ತು ಮತ್ತು ಅದಕ್ಕೂ ಹೆಚ್ಚಿನ ವಯಸ್ಸಿನ ನಿರ್ಗತಿಕ ವೃದ್ಧರಿಗೆ ಉಚಿತ ಊಟ, ವಸತಿ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಕಲ್ಪಿಸಿ ವೃದ್ಧರು ಸಮಾಜದಲ್ಲಿ ನಿಶ್ಚಿಂತೆಯಿಂದ ಬಾಳಲು ವೃದ್ಧಾಶ್ರಮಗಳನ್ನು ನಡೆಸುತ್ತಿರುವ ಮತ್ತು ನಡೆಸಲು ಉದ್ದೇಶಿಸಿರುವ<br>ಸ್ವಯಂ ಸೇವಾ ಸಂಸ್ಥೆಗಳಿಗೆ ಸರ್ಕಾರವು ಧನ ಸಹಾಯ ನೀಡುವ ಯೋಜನೆ.<br>**ಪ್ರಸ್ತುತ ಜಿಲ್ಲೆಗೊಂದರಂತೆ ಇರುವ ವೃದ್ಧಾಶ್ರಮವನ್ನು ರಾಜ್ಯದ ಎಲ್ಲಾ ಉಪವಿಭಾಗಗಳಿಗೆ ತಲಾ ಒಂದರಂತೆ ವಿಸ್ತರಿಸಲಾಗಿದೆ.** | • ಈ ಯೋಜನೆಯನ್ನು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ಅನುಷ್ಠಾನಗೊಳಿಸಲಾಗುತ್ತಿದೆ.<br>• ಸ್ವಯಂ ಸೇವಾ ಸಂಸ್ಥೆಯು ಸಾಕಷ್ಟು ಸಿಬ್ಬಂದಿ ವರ್ಗದೊಂದಿಗೆ ಅಗತ್ಯವಾದ ಸೌಲಭ್ಯ ಸಂಪನ್ಮೂಲ ಹಾಗೂ ಅನುಭವ ಹೊಂದಿ ಆರ್ಥಿಕವಾಗಿ ಸದೃಢತೆ ಹೊಂದಿರಬೇಕು.<br>• ಸ್ವಯಂ ಸೇವಾ ಸಂಸ್ಥೆಯು ವೃದ್ಧಾಶ್ರಮವನ್ನು ನಡೆಸುವಲ್ಲಿ ಅಥವಾ ಇಂತಹದೇ ಇನ್ನಿತರ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಅನುಭವ ಹೊಂದಿರಬೇಕು ಅಥವಾ ವೃದ್ಧಾಶ್ರಮವನ್ನು ನಡೆಸಲು ಬೇಕಾಗಿರುವ ಮೂಲಭೂತ ಸೌಲಭ್ಯಗಳನ್ನು ಹೊಂದಿರಬೇಕು ಅದರ ಬಗ್ಗೆ ದಾಖಲೆಗಳನ್ನು ಹಾಜರುಪಡಿಸಬೇಕು.<br>• ಯಾವುದೇ ಸಂಸ್ಥೆಯು ವೃದ್ಧಾಶ್ರವನ್ನು ಪ್ರಾರಂಭಮಾಡಬೇಕಾದಲ್ಲಿ ಕನಿಷ್ಠ 25 ಜನ ಫಲಾನುಭವಿಗಳು ಇರಬೇಕು.<br>• ರಾಜ್ಯ ಸರ್ಕಾರದಿಂದ ಪ್ರತಿ ಜಿಲ್ಲೆಗೆ ಒಂದರಂತೆ ಮಾತ್ರ ವೃದ್ಧಾಶ್ರಮಕ್ಕೆ ಅನುದಾನವನ್ನು ನೀಡಲಾಗುವುದು.<br>• ವೃದ್ಧಾಶ್ರಮವನ್ನು ಪ್ರಾರಂಭ ಮಾಡಬೇಕಾದಲ್ಲಿ ಮತ್ತು ಅನುದಾನವನ್ನು ಪಡೆಯಬೇಕಾದಲ್ಲಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ನೋಂದಣಿ ಮಾಡಿಸಬೇಕು. |

## ಜಿಲ್ಲಾ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಮಂಡ್ಯ
## 2017-18 ನೇ ಸಾಲಿನಿಂದ 2019-20 ನೇ ಸಾಲಿನವರೆಗೆ ವಿವಿಧ ಯೋಜನೆಗಳಲ್ಲಿ ವಿಕಲಚೇತನರಿಗೆ ವೆಚ್ಚ ಭರಿಸಿರುವ ವಿವರ

| ಕ್ರಸಂ | ಯೋಜನೆ ಹೆಸರು | ತಾಲ್ಲೂಕಿನ ಹೆಸರು | ವರ್ಷವಾರು | | |
|---|---|---|---|---|---|
| | | | 2017-18 | 2018-19 | 2019-20 |
| | | | ಆರ್ಥಿಕ | ಆರ್ಥಿಕ | ಆರ್ಥಿಕ |
| 1 | ವಿದ್ಯಾರ್ಥಿ ವೇತನ | ಮಂಡ್ಯ | 4.82 | 4.38 | 3.85 |
| | | ಮದ್ದೂರು | 2.35 | 2.36 | 1.87 |
| | | ಮಳವಳ್ಳಿ | 3.50 | 2.72 | 2.76 |
| | | ಶ್ರೀರಂಗಪಟ್ಟಣ | 1.55 | 1.60 | 1.38 |
| | | ಪಾಂಡವಪುರ | 1.29 | 0.92 | 0.80 |
| | | ನಾಗಮಂಗಲ | 1.31 | 1.27 | 1.00 |
| | | ಕೆ.ಆರ್.ಪೇಟೆ | 2.97 | 2.76 | 2.81 |
| ಒಟ್ಟು | | | **17.79** | **16.01** | **14.47** |
| 2 | ಪ್ರತಿಭಾ ಪ್ರೋತ್ಸಾಹಧನ | ಮಂಡ್ಯ | 0.77 | 0.80 | 1.32 |
| | | ಮದ್ದೂರು | 0.18 | 0.12 | 0.17 |
| | | ಮಳವಳ್ಳಿ | 0.16 | 0.11 | 0.32 |
| | | ಶ್ರೀರಂಗಪಟ್ಟಣ | 0.00 | 0.13 | 0.03 |
| | | ಪಾಂಡವಪುರ | 0.17 | 0.03 | 0.11 |
| | | ನಾಗಮಂಗಲ | 0.00 | 0.08 | 0.19 |
| | | ಕೆ.ಆರ್.ಪೇಟೆ | 0.19 | 0.17 | 0.30 |
| ಒಟ್ಟು | | | **1.47** | **1.44** | **2.44** |
| 3 | ಶುಲ್ಕಮರುಪಾವತಿ | ಮಂಡ್ಯ | 3.20 | 3.91 | 4.06 |
| | | ಮದ್ದೂರು | 0.20 | 0.14 | 0.08 |
| | | ಮಳವಳ್ಳಿ | 0.19 | 0.23 | 0.24 |
| | | ಶ್ರೀರಂಗಪಟ್ಟಣ | 0.93 | 1.13 | 0.66 |
| | | ಪಾಂಡವಪುರ | 0.06 | 0.03 | 0.07 |
| | | ನಾಗಮಂಗಲ | 0.04 | 0.40 | 0.06 |
| | | ಕೆ.ಆರ್.ಪೇಟೆ | 0.15 | 0.20 | 0.33 |
| ಒಟ್ಟು | | | **4.78** | **6.06** | **5.51** |

| | | | | | |
|---|---|---|---|---|---|
| 4 | ಆಧಾರ ಯೋಜನೆ | ಮಂಡ್ಯ | 2.10 | 0.00 | 1.00 |
| | | ಮದ್ದೂರು | 3.15 | 0.00 | 1.25 |
| | | ಮಳವಳ್ಳಿ | 3.85 | 0.00 | 1.00 |
| | | ಶ್ರೀರಂಗಪಟ್ಟಣ | 4.20 | 0.00 | 0.25 |
| | | ಪಾಂಡವಪುರ | 3.15 | 0.00 | 0.50 |
| | | ನಾಗಮಂಗಲ | 1.75 | 0.00 | 0.50 |
| | | ಕೆ.ಆರ್.ಪೇಟೆ | 4.90 | 0.00 | 0.90 |
| ಒಟ್ಟು | | | **23.10** | **0.00** | **5.40** |
| 5 | ವೈದ್ಯಕೀಯ ವೆಚ್ಚ ಮರುಪಾವತಿ ಯೋಜನೆ | ಮಂಡ್ಯ | 0.00 | 0.00 | 1.22 |
| | | ಮದ್ದೂರು | 0.00 | 1.00 | 0.00 |
| | | ಕೆ.ಆರ್.ಪೇಟೆ | 0.00 | 0.39 | 0.00 |
| ಒಟ್ಟು | | | **0.00** | **1.39** | **1.22** |
| 6 | ಸಾಧನೆ ಪ್ರತಿಭೆ ಯೋಜನೆ | ಮಂಡ್ಯ | 0.20 | 0.10 | 0.00 |
| | | ಮದ್ದೂರು | 3.30 | 3.20 | 1.37 |
| | | ಮಳವಳ್ಳಿ | 1.78 | 1.57 | 0.00 |
| | | ಶ್ರೀರಂಗಪಟ್ಟಣ | 0.00 | 0.43 | 0.44 |
| | | ಕೆ.ಆರ್.ಪೇಟೆ | 1.00 | 0.60 | 0.47 |
| ಒಟ್ಟು | | | **0.00** | **5.89** | **2.27** |
| 7 | ವಿವಾಹ ಪ್ರೋತ್ಸಾಹಧನ | ಮಂಡ್ಯ | 1.00 | 2.50 | 3.00 |
| | | ಮದ್ದೂರು | 5.50 | 5.50 | 4.00 |
| | | ಮಳವಳ್ಳಿ | 5.00 | 1.50 | 1.00 |
| | | ಶ್ರೀರಂಗಪಟ್ಟಣ | 1.50 | 2.00 | 0.50 |
| | | ಪಾಂಡವಪುರ | 0.50 | 0.50 | 0.50 |
| | | ನಾಗಮಂಗಲ | 3.00 | 0.50 | 0.50 |

| | | | | | |
|---|---|---|---|---|---|
| | | ಕೆ.ಆರ್.ಪೇಟೆ | 3.00 | 0.00 | 1.00 |
| **ಒಟ್ಟು** | | | **19.50** | **12.50** | **10.50** |
| 8 | ಶಿಶುಪಾಲನಾ ಭತ್ಯೆ | ಮಂಡ್ಯ | 0.40 | 0.40 | 0.50 |
| | | ಮದ್ದೂರು | 0.40 | 0.40 | 0.50 |
| | | ಮಳವಳ್ಳಿ | 0.30 | 0.30 | 0.42 |
| | | ಶ್ರೀರಂಗಪಟ್ಟಣ | 0.30 | 0.40 | 0.42 |
| | | ಕೆ.ಆರ್.ಪೇಟೆ | 0.40 | 0.40 | 0.50 |
| **ಒಟ್ಟು** | | | **1.80** | **1.90** | **2.34** |
| 9 | ಸಾಧನ ಸಲಕರಣೆ | ಮಂಡ್ಯ | 0.61 | 1.29 | 0.68 |
| | | ಮದ್ದೂರು | 0.53 | 0.94 | 0.68 |
| | | ಮಳವಳ್ಳಿ | 0.61 | 0.94 | 0.68 |
| | | ಶ್ರೀರಂಗಪಟ್ಟಣ | 0.27 | 0.58 | 0.68 |
| | | ಪಾಂಡವಪುರ | 0.27 | 0.50 | 0.68 |
| | | ನಾಗಮಂಗಲ | 0.44 | 0.77 | 0.68 |
| | | ಕೆ.ಆರ್.ಪೇಟೆ | 0.36 | 0.94 | 0.68 |
| **ಒಟ್ಟು** | | | **3.10** | **5.95** | **4.73** |
| 10 | ಶಿಶು ಕೇಂದ್ರೀಕೃತ ಯೋಜನೆ | ಮಂಡ್ಯ | 89.67 | 84.62 | 90.66 |
| | | ಮದ್ದೂರು | 22.82 | 26.32 | 27.05 |
| | | ಶ್ರೀರಂಗಪಟ್ಟಣ | 51.94 | 48.40 | 45.66 |
| | | ಪಾಂಡವಪುರ | 67.23 | 69.80 | 76.20 |
| **ಒಟ್ಟು** | | | **231.67** | **229.14** | **239.57** |
| 11 | ಹಗಲು ಯೋಗಕ್ಷೇಮ ಕೇಂದ್ರ | ಮಂಡ್ಯ | 11.196 | 9.846 | 9.846 |

| | | | | | |
|---|---|---|---|---|---|
| 12 | ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರ | ಮಂಡ್ಯ | 6.156 | 6.156 | 6.13705 |
| 13 | ಉದ್ಯೋಗಸ್ಥ ವಿಕಲಚೇತನ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯ | ಮಂಡ್ಯ | 11.54 | 0.00 | 0.00 |
| 14 | ಗ್ರಾಮೀಣ ಪುನರ್ವಸತಿ ಯೋಜನೆ | ಮಂಡ್ಯ | 13.58 | 14.44 | 13.98 |
| | | ಮದ್ದೂರು | 14.30 | 15.16 | 14.78 |
| | | ಮಳವಳ್ಳಿ | 12.86 | 13.72 | 13.26 |
| | | ಶ್ರೀರಂಗಪಟ್ಟಣ | 4.58 | 5.44 | 4.98 |
| | | ಪಾಂಡವಪುರ | 4.02 | 4.00 | 3.54 |
| | | ನಾಗಮಂಗಲ | 5.82 | 7.60 | 7.14 |
| | | ಕೆ.ಆರ್.ಪೇಟೆ | 10.70 | 11.55 | 11.10 |
| ಒಟ್ಟು | | | **65.86** | **71.91** | **68.78** |

**ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಮಂಡ್ಯ**

**2017-18 ನೇ ಸಾಲಿನಿಂದ 2019-20 ನೇ ಸಾಲಿನವರೆಗೆ ಮಂಡ್ಯ ಜಿಲ್ಲೆಗೆ ಬಿಡುಗಡೆಯಾಗಿರುವ ಅನುದಾನದ ವಿವರ**

| ಕ್ರ.ಸಂ | ಯೋಜನೆಯ ಹೆಸರು | 2017-18 | | 2018-19 | | 2019-20 | |
|---|---|---|---|---|---|---|---|
| | | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ |
| 1 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹಧನ ಯೋಜನೆ | 19.56 | 19.26 | 17.45 | 17.45 | 16.99 | 16.91 |
| 2 | ಸಾಧನ ಸಲಕರಣೆ | 3.30 | 3.10 | 6.00 | 5.95 | 7.00 | 4.91 |
| 3 | ಅಂಗವಿಕಲ ನಿವಾರಣೆ ಶಸ್ತ್ರ ಚಿಕಿತ್ಸೆ ಪರಿಹಾರ ನಿಧಿ | 1.50 | 0.00 | 1.50 | 1.39 | 1.25 | 1.22 |
| 4 | ಗ್ರಾಮೀಣ ಪುನರ್ವಸತಿ ಯೋಜನೆ | 67.08 | 66.42 | 73.25 | 71.91 | 69.05 | 69.00 |
| 5 | ಅರಿವಿನ ಸಿಂಚನ ಕಾರ್ಯಕ್ರಮ(ಯೋಜನೆ) | 4.03 | 3.80 | 0.00 | 0.00 | 0.00 | 0.00 |

| | | | | | | | |
|---|---|---|---|---|---|---|---|
| 6 | ಆಧಾರ ಯೋಜನೆ (ಯೋಜನೆ) | 23.45 | 22.44 | 0.00 | 0.00 | 8.00 | 5.40 |
| 7 | ಶಿಶುಪಾಲನಾ ಭತ್ಯೆ | 2.09 | 1.80 | 1.90 | 1.88 | 2.34 | 2.34 |
| 8 | ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ | 231.67 | 231.67 | 229.13 | 229.13 | 239.57 | 239.57 |
| 9 | ಸಾಧನೆ ಪ್ರತಿಭೆ ಯೋಜನೆ | 6.69 | 6.28 | 6.00 | 5.89 | 2.40 | 2.27 |
| 10 | ವಿಕಲಚೇತನರ ವಿವಾಹ ಯೋಜನೆ | 19.50 | 19.50 | 12.50 | 12.50 | 10.50 | 10.50 |
| 11 | ಉನ್ನತ ಶಿಕ್ಷಣ ಶುಲ್ಕ ಮರುಪಾವತಿ ಯೋಜನೆ | 5.51 | 4.78 | 6.00 | 5.64 | 6.00 | 5.51 |
| 12 | ನಿರಾಮಯ ಯೋಜನೆ | 0.25 | 0.25 | 0.00 | 0.00 | 0.00 | 0.00 |
| 13 | ವಿಕಲಚೇತನರ ಸಹಾಯವಾಣಿ ಹಾಗೂ ಮಾಹಿತಿ ಸಲಹಾ ಕೇಂದ್ರ ಯೋಜನೆ | 4.51 | 4.20 | 4.79 | 4.68 | 4.58 | 4.20 |
| 14 | ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರ | 6.16 | 6.16 | 6.16 | 6.16 | 6.14 | 6.14 |
| 15 | ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರ | 11.20 | 11.20 | 9.85 | 9.85 | 9.85 | 9.85 |
| 16 | ಉದ್ಯೋಗಸ್ಥ ವಿಕಲಚೇತನ ಮಹಿಳೆಯರ ಹಾಗೂ ವಿದ್ಯಾರ್ಥಿನಿಯರ ವಸತಿ ನಿಲಯ ಮಂಡ್ಯ | 11.54 | 11.54 | 0.00 | 0.00 | 0.00 | 0.00 |
| 17 | ಸ್ಪರ್ಧಾಚೇತನ ಯೋಜನೆ | 0.51 | 0.00 | 0.00 | 0.00 | 0.00 | 0.00 |
| **ಒಟ್ಟು** | | **418.54** | **412.37** | **374.52** | **372.41** | **383.66** | **377.82** |

## ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವಿವಿಧ ಯೋಜನೆಗಳು ಮತ್ತು ಸೌಲಭ್ಯ ಪಡೆಯಲು ಹೊಂದಿರಬೇಕಾದ ಅರ್ಹತೆಗಳು

| ಕ್ರ.ಸಂ | ಫಲಾನುಭವಿ ಆಧಾರಿತ ಯೋಜನೆ/ಕಾರ್ಯಕ್ರಮ | ಸೌಲಭ್ಯ ಪಡೆಯಲು ಹೊಂದಿರಬೇಕಾದ ಅರ್ಹತೆಗಳು |
|---|---|---|
| 1 | ಉದ್ಯೋಗಿನಿ | 1. ಕುಟುಂಬದ ವಾರ್ಷಿಕ ಆದಾಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ರೂ.2,00,000/- ಗಳು ಹಾಗೂ ವಿಶೇಷ ವರ್ಗ ಹಾಗೂ ಸಾಮಾನ್ಯ ವರ್ಗದ ಮಹಿಳೆಯರಿಗೆ ರೂ.1,50,000/-ಗಳಿಗೆ ಮೀರಿರಬಾರದು.2. ಎಲ್ಲಾ ವರ್ಗದ ಮಹಿಳೆಯರಿಗೆ ವಯೋಮಿತಿ 18 ರಿಂದ 55 ವರ್ಷಗಳು.<br>3. ಸಾಲ ಮಂಜೂರಾದ ನಂತರ ಉದ್ಯಮಶೀಲತ ತರಬೇತಿಗೆ ಕಡ್ಡಾಯವಾಗಿ ಹಾಜರಾಗಬೇಕು.<br>4. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಬ್ಯಾಂಕ್ ಖಾತೆ ಹೊಂದುವುದು. ಬ್ಯಾಂಕ್ ಖಾತೆಯೊಂದಿಗೆ ಅರ್ಜಿದಾರರ ಆಧಾರ ಸೀಡಿಂಗ್ ಆಗಿರಬೇಕು.<br>5. ಮಾನ್ಯ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳ ಆಯ್ಕೆ ಮಾಡಲಾಗುತ್ತದೆ. |
| 2 | ಕಿರುಸಾಲ ಯೋಜನೆ | 1. ಗುಂಪಿನ ಉಳಿತಾಯ ಕನಿಷ್ಟ ರೂ.1.00 ಲಕ್ಷ ಅಥವಾ ಅದಕ್ಕಿಂತ ಹೆಚ್ಚು ಇರಬೇಕು.<br>2.ಸ್ತ್ರೀಶಕ್ತಿ ಗುಂಪು ತಾಲ್ಲೂಕು ಒಕ್ಕೂಟದಲ್ಲಿ ನೊಂದಣಿಯಾಗಿದ್ದು, ಸದಸ್ಯತ್ವ ಹೊಂದಿರಬೇಕು.<br>3.ಗುಂಪಿನ ಸದಸ್ಯರೆಲ್ಲರೂ ಸೇರಿ ಒಂದೇ ಉದ್ದಿಮೆ ಕೈಗೊಳ್ಳಬೇಕು.<br>4.ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಬ್ಯಾಂಕ್ ಖಾತೆ ಹೊಂದುವುದು.<br>5.ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಸಂಘದ ಗ್ರೇಡಿಂಗ್ ಆಗಿರಬೇಕು. ಎ ಅಥವಾ ಬಿ ಗ್ರೇಡ್ ಪಡೆದಿರಬೇಕು.<br>6. ಮಾನ್ಯ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ. |
| 3 | ಚೇತನ ಯೋಜನೆ | 1. ವಯೋಮಿತಿ 18 ವರ್ಷ ಮೀರಿರಬೇಕು.<br>2.ಲೈಂಗಿಕ ಕಾರ್ಯಕರ್ತೆಯರ ಸಮುದಾಯ ಆಧಾರಿತ ಸಂಸ್ಥೆಯ ಗುರುತಿನ ಚೀಟಿ ಹೊಂದಿರಬೇಕು<br>3.ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಬ್ಯಾಂಕ್ ಖಾತೆ ಹೊಂದುವುದು. ಬ್ಯಾಂಕ್ ಖಾತೆಯೊಂದಿಗೆ ಅರ್ಜಿದಾರರ ಆಧಾರ ಸೀಡಿಂಗ್ ಆಗಿರಬೇಕು.<br>4.ಯಾವುದೇ ಬ್ಯಾಂಕು/ಸಂಸ್ಥೆಗಳಲ್ಲಿ ಸುಸ್ತಿದಾರರಾಗಿರಬಾರದು ಎನ್ನುವುದು ಕಡ್ಡಾಯವಾಗಿರುತ್ತದೆ.<br>5.ಎಲ್ಲಾ ವರ್ಗದ ದಮನಿತ ಮಹಿಳೆಯರಿಗೆ ಇ.ಡಿ.ಪಿ. ತರಬೇತಿಯೊಂದಿಗೆ ಸೌಲಭ್ಯ ನೀಡಲಾಗುತ್ತದೆ.<br>6.ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆಮಾಡಲಾಗುತ್ತದೆ. |

| | | |
|---|---|---|
| 4 | ಧನಶ್ರೀ ಯೋಜನೆ | 1. ಅರ್ಜಿದಾರರು ಹೆಚ್.ಐ.ವಿ. ಸೋಂಕಿತರೆಂದು ಆರೋಗ್ಯ ಕೇಂದ್ರದಲ್ಲಿ/ಐ.ಸಿ.ಟಿ.ಸಿ. ಕೇಂದ್ರಗಳಲ್ಲಿ ಪಡೆದ ವೈದ್ಯಕೀಯ ವರದಿಯನ್ನು ಹೊಂದಿರುವುದು.<br>2. ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ.<br>3.ಅರ್ಜಿದಾರರು ರಾಷ್ಟ್ರೀಕೃತ ಬ್ಯಾಂಕ್ ಖಾತೆಯನ್ನು ಹೊಂದಿದ್ದು, ಚಾಲ್ತಿಯಲ್ಲಿರಬೇಕು.<br>4.ಅರ್ಜಿದಾರರು 18 ರಿಂದ 60 ವರ್ಷದೊಳಗಿರಬೇಕು.<br>5. ಅರ್ಜಿದಾರರು ಖಾತೆ ಹೊಂದಿರುವ ಆರ್ಥಿಕ ಸಂಸ್ಥೆ/ ಬ್ಯಾಂಕುಗಳಲ್ಲಿ ಸಾಲಗಾರರಾಗಿರಬಾರದು. |
| 5 | ಲಿಂಗತ್ವ ಅಲ್ಪಸಂಖ್ಯಾತರ ಪುನರ್ವಸತಿ ಯೋಜನೆ | 1. ವಯೋಮಿತಿ 18 ವರ್ಷ ಮೀರಿರಬೇಕು.<br>2.ಲಿಂಗತ್ವ ಅಲ್ಪಸಂಖ್ಯಾತರು ಸಮುದಾಯ ಆಧಾರಿತ ಸಂಸ್ಥೆ ಅಥವಾ ಜಿಲ್ಲಾಧಿಕಾರಿಗಳು ಅನುಮೋದಿಸಿದ ಸಂಸ್ಥೆಗಳಾದ ಸಂಗಮ ಅಥವಾ ಕೆ.ಎಸ್.ಎಂ.ಎಫ್. ಸಂಸ್ಥೆಗಳಲ್ಲಿ ನೊಂದಣಿಯಾಗಿರಬೇಕು.<br>3.ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಬ್ಯಾಂಕ್ ಖಾತೆ ಹೊಂದುವುದು. ಬ್ಯಾಂಕ್ ಖಾತೆಯೊಂದಿಗೆ ಅರ್ಜಿದಾರರ ಆಧಾರ ಸೀಡಿಂಗ್ ಆಗಿರಬೇಕು.<br>4.ಯಾವುದೇ ಬ್ಯಾಂಕು/ಸಂಸ್ಥೆಗಳಲ್ಲಿ ಸುಸ್ತಿದಾರರಾಗಿರಬಾರದು ಎನ್ನುವುದು ಕಡ್ಡಾಯವಾಗಿರುತ್ತದೆ.<br>5. ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ. |
| 6 | ಮಹಿಳಾ ತರಬೇತಿ ಯೋಜನೆ | 1 ಆರ್ಥಿಕವಾಗಿ ಹಿಂದುಳಿದ ಮಹಿಳೆಯರಿಗೆ, ವಿಧವೆಯರಿಗೆ, ನಿರ್ಗತಿಕ ಮತ್ತು ವಿಕಲಚೇತನರಿಗೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ತರಬೇತಿ ನೀಡಿ ಉದ್ಯಮಶೀಲತೆ ಬೆಳೆಸುವುದು.<br>2.ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯಿಂದ ಮಾನ್ಯತೆ ಪಡೆದ ತರಬೇತಿ ಸಂಸ್ಥೆಗಳ ಮೂಲಕ ತರಬೇತಿಯನ್ನು ನೀಡುವುದು.<br>3. ವಯೋಮಿತಿ 18 ರಿಂದ 45 ವರ್ಷಗಳು. |
| 7 | ಬಡ್ಡಿ ಸಹಾಯಧನ ಯೋಜನೆ (ಕೆ.ಎಸ್.ಎಫ್.ಸಿ. ಮುಖಾಂತರ) | 1.ಹಾಲಿ ಕಾರ್ಯನಿರ್ವಹಿಸುತ್ತಿರುವ ಸಣ್ಣ/ಮಧ್ಯಮ ಕೈಗಾರಿಕೆಗಳು ಹಾಗೂ ಸೇವಾ ಘಟಕಗಳ ಉದ್ದಿಮೆದಾರರಿಗೆ ತಮ್ಮ ಘಟಕವನ್ನು ಅಭಿವೃದ್ಧಿ ಪಡಿಸುವ ಸಲುವಾಗಿ/ ಆಧುನೀಕರಣಗೊಳಿಸುವ ಸಲುವಾಗಿ. ಘಟಕ ವೆಚ್ಚ ಕನಿಷ್ಠ ರೂ.5ಲಕ್ಷದಿಂದ ಗರಿಷ್ಠ ರೂ.2ಕೋಟಿಗಳ ವರೆಗೆ ಆರ್ಥಿಕ ನೆರವು ಒದಗಿಸಲಾಗುವುದು.<br>2. * ಈ ಘಟಕದ ಮಾಲೀಕರು ಮಹಿಳಾ ಅಭ್ಯರ್ಥಿಯಾಗಿರಬೇಕು.<br>* ಪಾಲುದಾರಿಕೆಯ ಉದ್ಯಮ/ನಿಯಮಿತ ಕಂಪನಿಗಳಲ್ಲಿ ಹೆಚ್ಚಿನ ಷೇರು/ನಿರ್ದೇಶಕರು ಶೇ 5ರಷ್ಟು ಇರಬೇಕು.<br>* ಫಲಾನುಭವಿಗಳು ಒಂದು ಸಲ ಮಾತ್ರ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. |

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವಿವಿಧ ಯೋಜನೆಗಳಡಿ ಮಂಡ್ಯ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ನೀಡಲಾದ ಅನುದಾನದ ತಾಲ್ಲೂಕುವಾರು ವಿವರ**

(ರೂಗಳಲ್ಲಿ)

| ಕ್ರ ಸಂ | ಯೋಜನೆಯ ಹೆಸರು | ವರ್ಷ | ಮಂಡ್ಯ | ಮದ್ದೂರು | ಶ್ರೀರಂಗ ಪಟ್ಟಣ | ಪಾಂಡವಪುರ | ನಾಗಮಂಗಲ | ಮಳವಳ್ಳಿ | ಕೆ.ಆರ್. ಪೇಟೆ |
|---|---|---|---|---|---|---|---|---|---|
| 1 | ಉದ್ಯೋಗಿನಿ | 2017–18 | 526240 | 386240 | 278220 | 375720 | 227700 | 280720 | 518220 |
| | | 2018–19 | 604500 | 604500 | 544500 | 513750 | 453750 | 604500 | 664500 |

| | | | | | | | | | |
|---|---|---|---|---|---|---|---|---|---|
| | | 2019–20 | 555000 | 555000 | 585000 | 585000 | 555000 | 510000 | 555000 |
| 2 | ಕಿರುಸಾಲ | 2017–18 | 400000 | 400000 | 400000 | 400000 | 200000 | 400000 | 200000 |
| | | 2018–19 | 200000 | 200000 | 200000 | 200000 | 200000 | 200000 | 200000 |
| | | 2019–20 | 200000 | 200000 | 200000 | 200000 | 200000 | 200000 | 200000 |
| 3 | ಚೇತನ | 2017–18 | 50520 | 50520 | – | – | – | 50520 | 50520 |
| | | 2018–19 | 101500 | 101500 | 50750 | 50750 | 50750 | 101500 | 50750 |
| | | 2019–20 | 50750 | – | – | 100752 | – | 50750 | 100750 |
| 4 | ಧನಶ್ರೀ | 2017–18 | 353640 | 151560 | 151560 | 151560 | 151560 | 151560 | 202080 |
| | | 2018–19 | 152250 | 152250 | 152250 | 152250 | 101500 | 152250 | 152250 |
| | | 2019–20 | 152250 | 152250 | 152250 | 152250 | 152250 | 152250 | 152250 |
| 5 | ಲಿಂಗತ್ವ ಅಲ್ಪಸಂಖ್ಯಾತರ ಪುನರ್ವಸತಿ | 2017–18 | 202080 | 50520 | 50520 | 50520 | 50520 | 50520 | 50520 |
| | | 2018–19 | 152250 | 152250 | 152250 | 152250 | 101500 | 152250 | 152250 |
| | | 2019–20 | 50750 | 50750 | 50750 | 50750 | 50750 | 50750 | 50750 |
| 6 | ಮಹಿಳಾ ತರಬೇತಿ | 2017–18 | – | – | – | – | – | – | – |
| | | 2018–19 | – | 1197000 | – | – | – | – | 1306800 |
| | | 2019–20 | – | – | – | – | – | – | – |
| 7 | ಸಮೃದ್ಧಿ | 2017–18 | 900000 | 550000 | 500000 | 500000 | 500000 | 550000 | 500000 |
| | | 2018–19 | 180000 | 180000 | 180000 | 180000 | 180000 | 180000 | 180000 |
| | | 2019–20 | 180000 | 170000 | 180000 | 180000 | 180000 | 180000 | 180000 |
| 8 | ಬಡ್ಡಿ ಸಹಾಯಧನ (ಕೆ.ಎಸ್.ಎಫ್.ಸಿ) *** | 2017–18 | 334000 | 1548000 | 75000 | – | 466000 | 329000 | – |
| | | 2018–19 | 2857000 | 2816000 | 809000 | 406000 | 2794000 | 458000 | – |
| | | 2019–20 | 5059000 | 2123000 | 2465000 | 241000 | 2648000 | 202000 | – |

*** ಕೆ.ಎಸ್.ಎಫ್.ಸಿ ಇಂದ ಸಾಲ ಬಿಡುಗಡೆಮಾಡಿದ ಮಹಿಳಾ ಉದ್ಯಮಿಗಳಿಗೆ ವಿದಿಸುವ ಬಡ್ಡಿಯಲ್ಲಿ ಶೇಕಡ 10% ರಷ್ಟು ಬಡ್ಡಿಯನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಪಾವತಿಸಲಾಗುವುದು.